# ಭರತನ ಬಂಧುಪ್ರೇಮ



ಗ್ರಂಥಕರ್ತ

ಹೊಸಕೆರೆ ಚಿದಂಬರಯ್ಯ

ಭಕ್ತಬಂಧುಕಾರ್ಯಾಲಯ, ಬಸವನಗುಡಿ

**ಬೆಂಗಳೂರು ಸಿಟಿ**



ಕ್ರಿ. ೧೯೨೬



ಮೂರನೆ ಮುದ್ರಣ ೧,೦೦೦ ಪ್ರತಿಗಳು

ಶಾ. ೧೮೪೮



**ಬಿ. ಬಿ. ಡಿ. ಪವರ್ ಪ್ರೆಸ್,**

**ಬೆಂಗಳೂರು ಸಿಟಿ.**

# ಈ ಗ್ರಂಥಕರ್ತರ ಗ್ರಂಥಗಳು

## ಶಾಲೋಪಯೋಗಿಪುಸ್ತಕಗಳು

ಗಣಿತಾಬ್ಜಭಾಸ್ಕರ, ಚರಿತ್ರಚಿಂತಾಮಣಿ, ಉಪಾಧ್ಯಾಯರ ಯೋಗ್ಯತೆಗಳು, ಮನಶ್ಶಿಕ್ಷಣ, ಬೋಧನಕ್ರಮ, ಬೋಧನೆಯ ಸ್ವಭಾವ.

## ಪದ್ಯಕಾವ್ಯಗಳು

ಅನುಭವಾಮೃತ (ಶುದ್ಧಪಾಠ) ಸರ್ವಾರ್ಥಸಂದರ್ಶಿನಿ ಎಂಬ ಟೀಕೆಯೊಡನೆ,
ಪರಮಾತ್ಮಸ್ತುತಿ, ಗುರುಸ್ತುತಿಸುಮಾಂಜಲಿ, ಭಕ್ತಿಗೀತಾವಳಿ,
ಮನಸ್ಸಿಗುಪದೇಶ, ನೀತಿಸಾರ, ಸ್ತ್ರೀಧರ್ಮಸಂಗ್ರಹ,
ಶಂಕರಸ್ತೋತ್ರಮಾಲೆ, ಮಾರುತಿಯ ಚರಿತ್ರೆ,
ಭಕ್ತಿದೀಪಿಕೆ, ಶ್ರೀವಿದ್ಯಾರಣ್ಯಕಾವ್ಯ.

## ನಾಟಕಗಳು

ಸುಶೀಲಾಪರಿಣಯ, ಕೃಷ್ಣಮಹೀಶ್ವರೀ, ಸುಧರ್ಮಪ್ರಭಾವ,
ಕಲಿಸಂತರಣ, ನವೀನಕಲ್ಪ, ಚೂಡಾಲೆ.

## ಕೀರ್ತನ—ಹರಿಕಥೆ—ಗಳು

ಗಣಪತಿಸ್ವಯಂವರ, ಅನಸೂಯಾಖ್ಯಾನ, ಧ್ರುವಾಖ್ಯಾನ, ಉತ್ತರಗೋಗ್ರಹಣ, ಶ್ರೀವಿದ್ಯಾರಣ್ಯಾಖ್ಯಾನ, ಶ್ರೀಶಂಕರಾಚಾರ್ಯರ ಆಖ್ಯಾನ.

## ಕಾದಂಬರಿಗಳು

ಕಾಲಾಂತಕ, ಮೈತ್ರೇಯಿ, ವಾಲ್ಮೀಕಿಯ ಜಯ.

## ಇತರ ವಚನಗ್ರಂಥಗಳು

ತಾರಾನಾಥತರ್ಕವಾಚಸ್ಪತಿ, ಮಾಧವರಾವ ಸಿಂಧ್ಯ, ವಸ್ತುಪ್ರದರ್ಶನ,
ಶಂಕರಕಥಾಮೃತ, ರಾಜಭಕ್ತಿ, ಆರ್ಯಮತಸಾರ, ಸೂಕ್ತಿಮಾಲೆ,
ಭಗವದ್ಗೀತಾಸಾರವಿಚಾರ, ಗೀತಾರ್ಥವಿವರಣೆ, ಜೀವನ್ಮುಕ್ತಿವಿವೇಕ,
ಈಶಸಾರ, ವೇದಾಂತವಿಚಾರದ ಗುಟ್ಟು, ಬ್ರಹ್ಮಾನಂದರು,
ರಾಮನಾಮದ ಮಹಿಮೆ, ಭರತನ ಬಂಧುಪ್ರೇಮ,
ಗುಣನಿರೂಪಣೆ, ರಾಸಕ್ರೀಡೆ, ಝಾನ್ಸಿಲಕ್ಷ್ಮೀಬಾಯಿ,
ಭರತಖಂಡದ ಜೀವಜ್ಯೋತಿಗಳು,
ಆತ್ಮಶಕ್ತಿಯ ತೇಜಸ್ಸು, ಆರ್ಯಧರ್ಮಪ್ರದೀಪ,
ನೀತಿಗಳ ನೆಲಗಟ್ಟು—ಮೊದಲಾದವು.

# ಮೊದಲನೆ ಮುದ್ರಣದ ಮುನ್ನುಡಿ.

ಭರತನ ಬಂಧುಪ್ರೇಮವು ಬರೀ ಭರತಖಂಡಕ್ಕೆ ಮಾತ್ರನೇ ಅಲ್ಲ; ಅಖಂಡ ಭೂಮಂಡಲಕ್ಕೂ ಮೇಲುಪಙ್ಕ್ತಿಯಾದದ್ದು. ಇದರ ಕಥಾಸಂವಿಧಾನವು ಎಲ್ಲರಿಗೂ ಗೊತ್ತಿದ್ದರೂ ಇಲ್ಲಿ ಇದನ್ನು ಶ್ರೀ ತುಲಸೀದಾಸರ ಪ್ರಾಸಾದಿಕವಾಣಿಯ ಸರಣಿಯಿಂದ ಅನುವಾದ ಮಾಡಿರುವದೂ ಮತ್ತು ನಡುನಡುವೆ ಪ್ರತಿಯೊಂದು ಪ್ರಾಚೀನಸಂಪ್ರದಾಯವನ್ನೂ ಆಧುನಿಕದೃಷ್ಟಿಯಿಂದ ಸಕಾರಣವಾಗಿ ಸಮಾಲೋಚನೆ ಮಾಡಿರುವದೂ ಈ ಕಥೆಗೆ ಹೊಸ ಬಗೆಯ ಹೊಳಪನ್ನು ಕೊಟ್ಟಿರುವವು. ಒಂದು ಹೊಟ್ಟೆಯಲ್ಲಿ ಹುಟ್ಟಿದವರು ಒಂದಾಗುವದಕ್ಕೆ ಬಂದ ಮೇಲಲ್ಲವೆ ಒಂದು ದೇಶದಲ್ಲಿ ಹುಟ್ಟಿದವರೂ ಒಂದು ಲೋಕದಲ್ಲಿ ಹುಟ್ಟಿದವರೂ ಒಂದಾಗುವದು? ಆದ್ದರಿಂದ ಎಲ್ಲೆಲ್ಲಿಯೂ ಐಕಮತ್ಯದ ಬಾಯಾರಿಕೆ ಹೆಚ್ಚಿರುವ ಈ ಕಾಲಕ್ಕೆ ಈ ಗ್ರಂಥವು ಮೊದಲನೆ ಚಿಕಿತ್ಸೆಯೆಂದು ಭಾವಿಸುತ್ತೇನೆ. ಈ ಗ್ರಂಥದ ವಿಚಾರಗಳು ಒಮ್ಮೆ ಮನೋಪಥದ ಮುಂದೆ ಹಾದು ಹೋದರೂ ಸಾಕು; ಅವು ಅಲ್ಲಿ ತಮ್ಮ ಸಂಸ್ಕಾರವನ್ನು ಬಿತ್ತಿ ಬೆಳೆಸದೆ ಹೋಗಲಾರವು.

ಬೆಂಗಳೂರು,
೧೯೨೦.

**ಚಿದಂಬರಯ್ಯ.**

---

# ಎರಡನೆ ಮುದ್ರಣದ ಮುನ್ನುಡಿ.

ಇದರ ಪ್ರಥಮಮುದ್ರಣವು ವಾಚಕರ ಆದರಕ್ಕೂ ಧಾರವಾಡದ ಕರ್ಣಾಟಕ ವಿದ್ಯಾವರ್ಧಕಸಂಘದವರ ಸಂಭಾವನೆಗೂ ಪಾತ್ರವಾಗುವದರ ಮೂಲಕ ದೊರೆತ ಪ್ರೋತ್ಸಾಹದ ಜೊತೆಗೆ ಗುಣೈಕಪಕ್ಷಪಾತಿಗಳಾದ ಮೈಸೂರ ಸರಕಾರದವರು ಇದನ್ನು ತಮ್ಮ ಸಂಸ್ಥಾನದ ಹೈಸ್ಕೂಲ ವರ್ಗಗಳ ಪಠ್ಯಪುಸ್ತಕವಾಗಿ ಆರಿಸಿಕೊಂಡು ಪ್ರೋತ್ಸಾಹಿಸಿದ್ದರಿಂದ ಇಷ್ಟು ಬೇಗ ಇದರ ಈ ದ್ವಿತೀಯಮುದ್ರಣಕ್ಕೆ ಅವಕಾಶ ಉಂಟಾಯಿತೆಂಬ ಸಂತೋಷದಿಂದ ಆ ನನ್ನ ಆಶ್ರಯದಾತರಿಗೆಲ್ಲಾ ಇಲ್ಲಿ ಕೃತಜ್ಞತಾಪೂರ್ವಕವಾಗಿ ವಂದಿಸುತ್ತೇನೆ.

ಬೆಂಗಳೂರು,
೧೯೨೩.

**ಗ್ರಂಥಕರ್ತ**

---

# ಮೂರನೆ ಮುದ್ರಣ ೧೯೨೬

# ವಿಷಯಕ್ರಮ


| ವಿಷಯ | ಪುಟ |
|---|---|
| ಪೀಠಿಕೆ .. .. .. .. | ೧ |
| ದಶರಥನ ಸಂತಾನಾಪೇಕ್ಷೆ .. .. | ೨ |
| ದಶರಥನು ಪುತ್ರಕಾಮೇಷ್ಟಿಯನ್ನು ಮಾಡಿದ್ದು .. | ೬ |
| ಭರತನ ಹುಟ್ಟು .. .. .. | ೧೧ |
| ಭರತನ ಪ್ರವಾಸ .. .. .. | ೧೫ |
| ಭರತನು ಅಯೋಧ್ಯೆಗೆ ತಿರುಗಿಬಂದದ್ದು .. | ೨೨ |
| ಭರತನಿಗೂ ಅವನ ತಾಯಿಯರಿಗೂ ನಡೆದ ಮಾತುಗಳು | ೨೬ |
| ಭರತನು ರಾಜ್ಯಭಾರವನ್ನೊಲ್ಲೆನೆಂದದ್ದು .. | ೪೧ |
| ಭರತನು ರಾಮನ ಕಡೆಗೆ ಹೊರಟದ್ದು .. .. | ೪೭ |
| ಗುಹನ ಸಹಾಯ ದೊರೆತದ್ದು .. .. | ೫೧ |
| ಭರದ್ವಾಜಾಶ್ರಮದಲ್ಲಿ ನಡೆದ ಸಂಗತಿ .. .. | ೫೭ |
| ಚಿತ್ರಕೂಟದರ್ಶನ .. .. .. | ೬೪ |
| ಶ್ರೀರಾಮಸಂದರ್ಶನ .. .. .. | ೬೫ |
| ಶ್ರೀರಾಮಾಶ್ರಮವಾಸ .. .. .. | ೭೬ |
| ರಾಮನನ್ನು ಹಿಂದಿರುಗಿಸುವ ವಿಚಾರ .. .. | ೭೯ |
| ಭರತನು ವ್ರತಸ್ಥನಾದದ್ದು .. .. | ೮೪ |
| ಮಾರುತಿಯ ಪರಿಚಯ ಒದಗಿದ್ದು .. .. | ೮೯ |
| ರಾಮನು ಹಿಂದಿರುಗಿ ಬಂದದ್ದು .. .. | ೯೪ |
| ಸಾರಾಂಶ .. .. .. .. | ೯೮ |

॥ ಶ್ರೀರಾಮಚಂದ್ರಗುರುಪರಬ್ರಹ್ಮಣೇ ನಮಃ ॥

# ಭರತನ ಬಂಧುಪ್ರೇಮ



## ಪೀಠಿಕೆ

ಈ ಸೃಷ್ಟಿಯಲ್ಲಿ ಪ್ರೇಮದ ಬೀಜವಿಲ್ಲದ ಪ್ರಾಣಿಯೇ ಇಲ್ಲ. ಈ ಬೀಜವೊಂದಿಲ್ಲದಿದ್ದರೆ ಈ ಪ್ರಪಂಚದಲ್ಲಿ ಸುಖವೆಂಬುದರ ಗಂಧವೇ ಇರುತ್ತಿರಲಿಲ್ಲ. ಈ ಪ್ರೇಮದ ಬೀಜವು ಬೆಳೆಯುವದಕ್ಕೆ ಪಶುಗಳಲ್ಲಿ ಸೌಕರ್ಯವು ಕಡಿಮೆ. ಮನುಷ್ಯರು ಇದನ್ನು ಬೇಕಾದಷ್ಟು ಬೆಳೆಸಿಕೊಂಡು ಸದುಪಯೋಗಮಾಡಿಕೊಳ್ಳಬಹುದು. ಪ್ರೇಮವನ್ನ ನಾವು ಸರಿಯಾದ ರೀತಿಯಲ್ಲಿ ಎಷ್ಟು ಹೆಚ್ಚಾಗಿ ಬೆಳೆಸಿಕೊಳ್ಳುತ್ತೇವೊ ಅಷ್ಟು ಹೆಚ್ಚಾಗಿ ನಮಗೆ ಎಲ್ಲೆಲ್ಲಿಯೂ ಸಹಾನುಭೂತಿ ದೊರೆಯುವದು. ಹೀಗೆಯೇ ನಡೆಯುತ್ತ ಹೋದರೆ ಪ್ರೇಮದಿಂದ ನಾವು ಎಲ್ಲರಲ್ಲಿಯೂ ಒಂದಾಗಿ ಶುದ್ಧವಾದ ಸುಖಕ್ಕೆ ಭಾಗಿಗಳಾಗುವೆವು. ಹೀಗಾಗುವದು ಯಾರಿಗೆ ತಾನೆ ಬೇಡ? ಎಲ್ಲರಿಗೂ ಬೇಕಾದರೂ ಪ್ರಯತ್ನವಿಲ್ಲದೆ ಅದು ಬರುವದಿಲ್ಲ. ಮನುಷ್ಯರಲ್ಲಿರುವ ಪ್ರೇಮದ ಬೀಜಕ್ಕೆ ಬೆಳೆಯುವದೇ ಸ್ವಭಾವವಾದರೂ ನಾವು ಅದರ ಕಡೆಗೆ ಲಕ್ಷ್ಯವನ್ನು ಕೊಡದೆ ಹೋದರೆ ಅದು ಕಂಡ ಕಂಡ ಕಡೆಗೆಲ್ಲಾ ಹಬ್ಬಿಕೊಂಡು ತನ್ನ ಶ್ರೇಷ್ಠತೆಯನ್ನು ಕಳೆದುಕೊಳ್ಳುವದು. ಆದದ್ದರಿಂದ ಅದನ್ನು ಯಾವ ಯಾವ ಕಡೆಗೆ ಎಷ್ಟೆಷ್ಟರ ಮಟ್ಟಿಗೆ ಬೆಳೆಸಿಕೊಳ್ಳಬೇಕೆಂಬುದಕ್ಕೆ ನಾವು ನಮ್ಮ ಮುಂದೆ ಒಂದು ಮೇಲುಪಙ್ಕ್ತಿಯನ್ನು ಇಟ್ಟುಕೊಳ್ಳುವದಗತ್ಯವು. ಈ ಗ್ರಂಥದಲ್ಲಿ ತೋರಿಸುವ ಭರತನ ಪ್ರೇಮವು ನಮ್ಮೆಲ್ಲರ ಅನುಕರಣಕ್ಕೂ ಯೋಗ್ಯವಾದ ಮೇಲುಪಙ್ಕ್ತಿಯಾಗಿದೆ. ಮನುಷ್ಯತ್ವವನ್ನು ಸಾರ್ಥಕಮಾಡಿಕೊಳ್ಳುವದೆಂದರೆ ಪ್ರೇಮವನ್ನು

ಪೂರ್ಣವಾಗಿ ಬೆಳೆಸಿಕೊಳ್ಳುವದು. ಆದ್ದರಿಂದ ತಮ್ಮ ಈ ಹುಟ್ಟು ತಮ್ಮನ್ನು ಹಡೆದವರ ಪ್ರಾಯವನ್ನು ಕುಗ್ಗಿಸುವಷ್ಟಕ್ಕೇ ಆಗದೆ ತಮ್ಮ ಉನ್ನತಿಗೆ ಸಾಧನವಾಗಬೇಕೆಂಬ ಉದಾರಬುದ್ಧಿಯವರೆಲ್ಲರೂ ಈ ಉದಾಹರಣೆಯನ್ನು ಅವಶ್ಯಕವಾಗಿ ಇಟ್ಟುಕೊಳ್ಳತಕ್ಕದ್ದು. ಹಾಗೆ ಇಟ್ಟುಕೊಂಡು ನಡೆಯುವವರಿಗೆ ಲೋಕೋತ್ತರವಾದ ಸುಖವು ಕರತಲಾಮಲಕವಾಗುವದೆಂಬ ವಿಷಯದಲ್ಲಿ ಎಳ್ಳಷ್ಟು ಹಿಂದುಮುಂದು ನೋಡಬೇಕಾದ್ದಿಲ್ಲ. ಭರತನೆಂಬ ಹೆಸರು ಧರ್ಮಾಭಿಮಾನಿಗಳಾದ ನಮ್ಮ ದೇಶೀಯರ ಕಿವಿಗೆ ಹೊಸದೇನೂ ಅಲ್ಲ. ನಮ್ಮ ದೇಶದಲ್ಲಿ ಅಷ್ಟಿಷ್ಟಾದರೂ ರಾಮಾಯಣದ ಕಥೆಯನ್ನು ತಿಳಿಯದವರೇ ಇಲ್ಲ. ಆ ರಾಮಾಯಣದಲ್ಲಿ ಪ್ರಸಿದ್ಧನಾದ ಭರತನೇ ಈ ನಮ್ಮ ಕಥಾನಾಯಕನು.

## ದಶರಥನ ಸಂತಾನಾಪೇಕ್ಷೆ

ಅದೆಂಥ ದೈವನಾದರೂ ಹೇಳುವದಕ್ಕಾಗುವದಿಲ್ಲ. ಈ ಪ್ರಪಂಚದಲ್ಲಿ ಮನುಷ್ಯನಿಗೆ ಮನೆಯಲ್ಲಿ ಅಷ್ಟೈಶ್ವರ್ಯಗಳೂ ತುಂಬಿ ತುಳುಕುತ್ತಿದ್ದರೂ ಮಕ್ಕಳಿಲ್ಲದೆ ಹೋದರೆ ಅವನಿಗೆ ಅದೇ ಒಂದು ದೊಡ್ಡ ಕೊರತೆಯಾಗುವದು. ಅದು ಅವನ ಮನಸ್ಸಿಗೆ ಬೇರೆ ಯಾವ ಯಾವ ಸೌಖ್ಯದಿಂದಲೂ ಸಮಾಧಾನವಾಗದಂತೆ ಮಾಡಿ ಅವನನ್ನು ತಳಮಳವೆಂಬ ಸಮುದ್ರದ ತಳಕ್ಕೆ ತುಳಿದು ಹೂಳಿಬಿಡುವದು. ಮಕ್ಕಳಿಂದಿಗರು ಐಶ್ವರ್ಯವೇ ಮೊದಲಾದವುಗಳನ್ನು ಬೇಡುವದು ಕೂಡ ಮಕ್ಕಳಿಗಾಗಿಯೇ ಆಗಿರುವದು. ಮಕ್ಕಳಿಂದಾಗುವ ಸುಖವು ಬರೀ ಈ ಲೋಕವೊಂದರದೇ ಆಗಿರದೆ ಪರಲೋಕಕ್ಕೂ ಕೂಡ ಸಂಬಂಧಪಟ್ಟಿರುವದೆಂದು ನಮ್ಮ ಮಹರ್ಷಿಗಳು ನಿಶ್ಚಯಮಾಡಿರುವರು. ಮಕ್ಕಳು ನಮ್ಮ ಪರಲೋಕದ ಸುಖಕ್ಕೆ ಹೇಗೆ ಕಾರಣರಾದಾರೆಂಬುದನ್ನು ನಾವು ಭೌತಿಕಶಾಸ್ತ್ರದೃಷ್ಟಿಯಿಂದ ಸಾಧಿಸಿ ತೋರಿಸುವದಕ್ಕೆ ಬರುವಹಾಗಿಲ್ಲ. ಪರಲೋಕದ ಸುಖದ ಮಾತು ಹಾಗಿರಲಿ; ಪರಲೋಕವೆಂಬುದೊಂದುಂಟೆಂಬುದನ್ನೇ ಭೌತಿಕಶಾಸ್ತ್ರವು ಕಾಣಲರಿಯದು. ಇನ್ನು ಮಕ್ಕಳು ಪರಲೋಕದ ಸುಖಕ್ಕೆ ಹೇಗೆ ಕಾರಣ

ರಾದಾರೆಂಬದನ್ನು ಅದು ಹೇಗೆ ತೋರಿಸೀತು! ಪರಲೋಕ ಸಂಬಂಧ ವಾದ ಯಾವ ವಿಚಾರವನ್ನು ತಿಳಿಯುವದಕ್ಕೂ ನಮ್ಮ ಭೌತಿಕದೃಷ್ಟಿ ಯು ಸಾಕಾಗುವದಿಲ್ಲ. ನಮ್ಮ ಪೂರ್ವಿಕರು ಅದನ್ನು ತಿಳಿದದ್ದು ಜ್ಞಾನದೃಷ್ಟಿಯಿಂದ. ಆ ಜ್ಞಾನದೃಷ್ಟಿಯಿಂದ ಅವರು ಇಂಥ ಎಷ್ಟೋ ವಿಚಾರಗಳನ್ನು ತಿಳಿದು ಹೇಳಿರುವರು. ಅವುಗಳಲ್ಲಿ ಭೌತಿಕ ಶಾಸ್ತ್ರಕ್ಕೆ ಸಿಲುಕದವುಗಳೇ ಬಹಳವಾಗಿರುವವು. ಅವುಗಳೆಲ್ಲಾ ನಮ್ಮ ಅನುಭವದಲ್ಲಿ ಎಷ್ಟೋ ಸಮಂಜಸವಾಗಿ ಏಕಪ್ರಕಾರದಿಂದ ಇರು ವವು. ಭೌತಿಕದೃಷ್ಟಿಯಿಂದ ತಿಳಿದು ಹೇಳುವವರ ಮಾತುಗಳು ಎಷ್ಟೋ ವೇಳೆ ಬದಲಾಗುವದುಂಟು. ಈ ದಿವ್ಯಜ್ಞಾನದಿಂದ ತಿಳಿದು ಹೇಳುವವರ ಮಾತುಗಳು ಮಾತ್ರ ಯಾವಾಗಲೂ ಏಕರೂಪವಾಗಿ ರುವವು. ಜ್ಞಾನದೃಷ್ಟಿಯೆಂದರೇನೆಂಬುದು ಈಗ ತಿಳಿಯುವದಕ್ಕೆ ನಮಗೆ ಬಹಳ ಗಹನವಾಗಿರುವದಾದರೂ ಆ ಜ್ಞಾನಿಗಳಾದ ಮಹ ರ್ಷಿಗಳ ಮಾತುಗಳು ನಿತ್ಯಸಿದ್ಧಗಳೆಂದು ಅವುಗಳ ಮೇಲೆ ವಿಶ್ವಾಸ ವನ್ನಿಡತಕ್ಕದ್ದು ಅವರ ಸಂತತಿಯವರಾದ ನಮಗೆ ಯೋಗ್ಯವು.

ಆ ಮಾತು ಹಾಗಿರಲಿ. ಮಕ್ಕಳು ಈ ಲೋಕದ ಸುಖಕ್ಕೆ ಕಾರಣರೆಂಬುದಂತು ಎಲ್ಲರ ಅನುಭವದಲ್ಲಿಯೂ ಇದ್ದೇ ಇರುವದು. ಈ ಲೋಕದ ಸುಖವೆಂಬುದು ಮುಖ್ಯವಾಗಿ ಗೃಹಸ್ಥರಿಗಷ್ಟೆ. ಏಕೆಂ ದರೆ ಬ್ರಹ್ಮಚಾರಿಗಳು ಅನ್ನನಿದ್ರೆಗಳನ್ನು ಕೂಡ ಬಿಟ್ಟು ಓದುಬರಹ ಗಳನ್ನು ಕಲಿಯುವದರಲ್ಲಿ ಮುಳುಗಿ ತೇಲುತ್ತಿರುವರು. ಅವರಿಗೆ ಸುಖವೆಂಬುದು ಅವರವರ ಪಾಠಪ್ರವಚನಗಳಲ್ಲಿ ಮಾತ್ರ ತೋರುವದು. ಅವರು ಇತರರಂತೆ ಊಟ ಉಡಿಗೆಗಳನ್ನು ಮಾಡಿದರೂ ಅವರ ಮನ ಸ್ಸೆಲ್ಲಾ ಕಲಿಯಬೇಕಾದ ಸಂಗತಿಗಳಲ್ಲಿಯೇ ತೊಳಲುತ್ತಿರುವದರಿಂದ ಅವರಿಗೆ ಊಟಉಡಿಗೆಗಳ ಸೊಗಸು ಕಾಣುವದೇ ಇಲ್ಲ. ವಾನಪ್ರಸ್ಥ ರೆಂಬುವರಂತು ಈಗ ಇಲ್ಲವೇ ಇಲ್ಲ; ಹಿಂದೆ ಇದ್ದಾಗಲೂ ವಿಶೇಷ ವಾಗಿ ತಪಶ್ಚರ್ಯೆಯಿಂದ ದೇಹದಂಡನೆಯನ್ನು ಮಾಡುತ್ತ ಊರು ಕೇರಿಗಳನ್ನು ಬಿಟ್ಟು ಕಾಡಿನಲ್ಲಿರುತ್ತಿದ್ದರು. ಆದ್ದರಿಂದ ಅವರ ಪಾಲಿಗೆ ಈ ಲೋಕದ ಸುಖವು ಕಡಿಮೆ. ಇನ್ನು ಸಂನ್ಯಾಸಿಗಳ ವಿಷಯ

ವಂತು ಹೇಳಬೇಕಾದ್ದೇ ಇಲ್ಲ. ಅವರು ಈ ಪ್ರಪಂಚವೆಲ್ಲಾ ಬರೀ ತೋರಿಕೆಯ ಮಾತ್ರದ್ದೆಂದು ಇದರ ಕಡೆಗೆ ಕಡೆಗಣ್ಣನ್ನು ಕೂಡ ಹಾಕದೆ ಉಪೇಕ್ಷೆಮಾಡಿ ಇದರ ಸಂಬಂಧವೇ ನಮಗೆ ಇಲ್ಲವೆಂದು ದೀಕ್ಷೆಯನ್ನು ವಹಿಸಿದವರು. ಅವರಿಗೆ ಈ ಲೋಕದ ಸುಖವು ಹೇಗೆ ಸಿಕ್ಕೀತು? ಆದ್ದರಿಂದ ಈ ಲೋಕದ ಸುಖದ ಸ್ವಾಮ್ಯವೆಲ್ಲಾ ಗೃಹಸ್ಥರ ಪಾಲಿಗೇ ಸೂರೆಯಾಗಿರುವದು. **"ಗೃಹಿಣೀ ಗೃಹಮುಚ್ಯತೇ"** ಎಂದು ಪೂರ್ವಿಕರ ವಚನವಿರುವದು. ಗೃಹದ ಯಜಮಾನಿಗೇ ಗೃಹವೆಂಬ ಹೆಸರೆಂದು ಅದರ ಅರ್ಥ. ಆದ್ದರಿಂದ ಗೃಹಸ್ಥರ ಸುಖಕ್ಕೆಲ್ಲಾ ಗೃಹಿಣಿಯೇ ಕಾರಣವೆಂದು ನಿರ್ಣಯವಾಯಿತು. ಹೀಗೆ ಗೃಹಸ್ಥನಿಗೆ ತನ್ನ ಸುಖಕ್ಕೆ ತನ್ನ ಪತ್ನಿಯೇ ಕಾರಣಳಾದರೂ ಆ ದಂಪತಿಗಳ ಸುಖವು ಚೆನ್ನಾಗಿ ಮೈಗೂಡಿಕೊಂಡು ಕಾಣಬೇಕಾದರೆ ಮಕ್ಕಳು ಅಗತ್ಯ. ಮಕ್ಕಳು ತಾಯಿತಂದೆಗಳಿಬ್ಬರ ಅಂತಃಕರಣಗಳಿಗೆ ಹಾಕಿದ ಗಂಟಿನ ಹಾಗೆ ಇರುವರು. ಅಷ್ಟೇ ಅಲ್ಲ. ದಂಪತಿಗಳ ವಿನೋದಕಾಲಕ್ಷೇಪಕ್ಕೆ ಮಕ್ಕಳಷ್ಟು ಉತ್ತಮವಾದ ಉಪಕರಣವು ಬೇರೊಂದಿಲ್ಲ. ಬೇಕಾದಷ್ಟು ಐಶ್ವರ್ಯವಿದ್ದರೂ ಮಗುವಿನ ಚೆಲ್ಲಾಟಗಳ ಗಡಿಬಿಡಿ ಇಲ್ಲದ ಮನೆಯು—ಅದು ಅರಮನೆಯಾದರೂ—ಜನಸಂಚಾರವಿಲ್ಲದ ದಂಡಕಾರಣ್ಯದಂತೆಯೇ ಸರಿ. ಒಬ್ಬನು ಎಷ್ಟೇ ಬಡವನಾಗಿ ಮುರುಕು ಗುಡಿಸಲಿನಲ್ಲಿದ್ದರೂ ಮತ್ತು ಅವನು ದಾರಿದ್ರ್ಯದೋಷದಿಂದ ಹೊರಗೆ ಬಿರುಬಿಸಿಲಲ್ಲಿ ಕಟ್ಟುಬೆವರಿಟ್ಟು ನೀರು ಹರಿಯುವಂತೆ ದುಡಿದುದುಡಿದು ದಣಿದು ಬಂದರೂ ಮನೆಗೆ ಬರುವಾಗ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗು ಎದುರಿಗೆ ನಲಿಯುತ್ತಾ ಬಂದು ಬೀದಿಯ ಧೂಳಿಯಿಂದ ಮಲಿನವಾದ ತನ್ನ ದೇಹವನ್ನು ಸೋಕಿಸುತ್ತಲೇ ಆ ಗೃಹಸ್ಥನಿಗೆ ಹಿಂದಿನ ಕಷ್ಟಗಳೂ ಮುಂದಿನ ಕಷ್ಟಗಳೂ ಎಲ್ಲವೂ ಒಂದೇ ಸಲಕ್ಕೆ ಅಂತರ್ಧಾನವಾಗಿ ಹತ್ತು ದಿಕ್ಕುಗಳೂ ಆನಂದಮಯವಾಗಿರುವಂತೆ ಹೊಳೆಯುವವು. ಆ ಮಗುವಿನ ಸೋಂಕಿನಿಂದುಂಟಾಗುವ ಆನಂದಕ್ಕೆ ಮಗುವಿನ ದೇಹದ ಸ್ಥಿತಿ ಕಾರಣವಲ್ಲ ಆ ಮಗುವಿಗೆ ಶುಚಿಯ ಅಥವಾ ಅಶುಚಿಯ ಕಲ್ಪನೆಗಳಾಗಲಿ, ಸುಖ

ಅಥವಾ ಕಷ್ಟದ ಕಲ್ಪನೆಗಳಾಗಲಿ, ರಾಗದ ಅಥವಾ ದ್ವೇಷದ ಕಲ್ಪನೆಗಳಾಗಲಿ ಯಾವದೂ ಇರದೆ ಅದು ಬರೀ ಪ್ರೇಮದ ಆಟಗಳನ್ನೇ ಆಡುತ್ತ ಬರೀ ಪ್ರೇಮದ ಮೂರ್ತಿಯಾಗಿರುವದೇ ಕಾರಣ. ಮಗು ತನ್ನ ಹೊಟ್ಟೆಯಲ್ಲಿ ಹುಟ್ಟಿದ್ದಾದರೂ ಆಗಿರಲಿ; ಬೇರೊಬ್ಬರ ಹೊಟ್ಟೆಯಲ್ಲಿ ಹುಟ್ಟಿದ್ದಾದರೂ ಆಗಿರಲಿ; ಯಾವ ಕಾರಣವೂ ಇಲ್ಲದೆ ಕಂಡ ಮಾತ್ರಕ್ಕೇ ನಗುಮುಖವನ್ನು ಮಾಡಿಕೊಂಡು ತನ್ನನ್ನು ಎತ್ತಿಕೊಳ್ಳಿರೆಂದು ಮುದ್ದುಮುದ್ದಾದ ತೊದಲು ಮಾತಿನಿಂದ ಸೂಚಿಸುತ್ತ ನಿಷ್ಕಲ್ಮಷವಾದ ಮನೋವೃತ್ತಿಯಿಂದ ಬೆಳಗುವ ತನ್ನ ಕಣ್ಣಿನ ಪ್ರಕಾಶದ ಕಿರಣಗಳಿಂದ ಅದು ಸುತ್ತುಮುತ್ತಣವರನ್ನೆಲ್ಲಾ ಕಟ್ಟಿ ಎಳೆಯಿತೆಂದರೆ ಯಾರ ಅಂತಃಕರಣವು ತಾನೇ ಕರಗಿ ನೀರಾಗಿ ಹರಿಯುವದಿಲ್ಲ? ಹಾಗೆ ಯಾರಿಗಾದರೂ ಆಗದೇ ಇದ್ದರೆ ಅವರು ಎಷ್ಟು ಮಾತ್ರವೂ ಮನುಷ್ಯರೇ ಅಲ್ಲ. ಹೀಗೆ ತಾವೂ ತಮ್ಮದೊಂದು ಹೊಸ ಬಗೆಯ ಆನಂದಸಾಗರವನ್ನು ತಮ್ಮ ಮೇಲೆ ತಂದುಕೊಂಡು ಆ ಆನಂದಸಾಗರದ ಅಲೆಗಳನ್ನು ತಮ್ಮನ್ನು ಹೊತ್ತು ಹೆತ್ತವರ ಮೇಲೆಯೂ—ಅಷ್ಟೇಕೆ? ಅಪರಿವರೆನ್ನದೆ ಎಲ್ಲರ ಮೇಲೆಯೂ—ಹಾಯಿಸಿ ಅಭೇದಬುದ್ಧಿಯಿಂದ ಎಲ್ಲರಿಗೂ ಆನಂದವನ್ನು ಸೂರೆಮಾಡುವಂಥ ಮಕ್ಕಳ ಸ್ಥಿತಿಯನ್ನು ಏನೆಂದು ಹೇಳಬೇಕೋ ತಿಳಿಯದು.

ಮಹಾಮಹಾಜ್ಞಾನದೃಷ್ಟಿಯುಳ್ಳವರೆನಿಸಿಕೊಂಡಿರುವ ನಮ್ಮ ಪೂರ್ವಿಕರು ಕೂಡ ಈ ಮಕ್ಕಳ ಸ್ಥಿತಿಗೆ ಪ್ರಾಪಂಚಿಕವಾದ ಬೇರೆ ಯಾವ ಬೆಲೆಯನ್ನೂ ಕೊಡಲರಿಯದೆ ಮಕ್ಕಳನ್ನು ಐದು ವರ್ಷಗಳವರಿಗೂ ದೇವರಂತೆ ಭಾವಿಸಬೇಕೆಂದು ನಿಶ್ಚಯಿಸಿರುವರು. ಮತ್ತು ಈ ಪ್ರಪಂಚದಲ್ಲಿ ಪಾಪಪುಣ್ಯಗಳ ಮಿಶ್ರದಿಂದ ಜನ್ಮವನ್ನೆತ್ತಿ ಅತ್ಯಂತ ಕಠಿನವಾದ ತಪಶ್ಚರ್ಯೆಗಳನ್ನು ಮಾಡಿ ಆತ್ಮಸಾಕ್ಷಾತ್ಕಾರವನ್ನು ಪಡೆದು ಪರಮಪೂಜ್ಯರಾದ ಸಾಧುಗಳೆನಿಸಿಕೊಂಡು ಜೀವನ್ಮುಕ್ತಿಸುಖದಲ್ಲಿ ಓಲಾಡುತ್ತಿರುವವರು ಕೂಡ ಬಾಲರಂತೆ ಇರುವರೆಂದು ಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ. ಮಕ್ಕಳ ಸ್ಥಿತಿಯು ಅಷ್ಟು ಉತ್ತಮವಾದದ್ದು. ದೇವರಲ್ಲಿಯೂ ಜ್ಞಾನಿಗಳಲ್ಲಿಯೂ ಹೇಗೆ ಅನಿಮಿತ್ತ

ಪ್ರೇಮವು ತುಂಬಿರುವದೋ ಮಕ್ಕಳಲ್ಲಿಯೂ ಹಾಗೆಯೇ ಅಪರಿಮಿತ ಪ್ರೇಮವು ತುಂಬಿರುವದು. ಮನೆಯಲ್ಲಿ ಮಕ್ಕಳಿದ್ದಾರೆಂದರೆ ಪ್ರೇಮದ್ದೊಂದು ಅಕ್ಷಯಭಂಡಾರವಿರುವದೆಂದು ತಿಳಿಯಬೇಕು. ಆದ್ದರಿಂದ ಅವರು ಓಡಾಡುವ ಪ್ರದೇಶಗಳಲ್ಲಿಯೂ, ಅವರು ಮುಟ್ಟುವ ವಸ್ತುಗಳಲ್ಲಿಯೂ, ಅವರು ಉಡುವ ವಸ್ತ್ರಗಳಲ್ಲಿಯೂ, ಅವರು ಉಣ್ಣುವ ಊಟದಲ್ಲಿಯೂ, ಅವರು ತಿನ್ನುವ ತೀಸಿಯಲ್ಲಿಯೂ ಪ್ರೇಮಪ್ರವಾಹವು ಹರಡಿಕೊಳ್ಳುವದು. ಅವರ ತೊದಲ್ನುಡಿಯಿಂದ ಕೂಡಿದ ವಾಯುಮಂಡಲವೆಲ್ಲಾ ಪ್ರೇಮದ ಅಲೆಗಳಿಂದ ಕೂಡಿದ್ದಾಗುವದು. ಆದ್ದರಿಂದ ಐಹಿಕವಾದ ಸರ್ವಶ್ರಮಗಳನ್ನೂ ಪರಿಹರಿಸುವ ವಿಷಯದಲ್ಲಿ ಮಕ್ಕಳಂಥ ಉತ್ಕೃಷ್ಟವಾದ ಉಪಕರಣವಿನ್ನಿಲ್ಲ. ಇದನ್ನರಿತೋ ಅರಿಯದೆಯೋ ಲೋಕದಲ್ಲಿ ಎಲ್ಲರೂ ಸಹಜವಾಗಿ ಮಕ್ಕಳುಮಕ್ಕಳೆಂದು ಬಾಯಿನೀರು ಸುರಿಸುವರು. ಅಯೋಧ್ಯೆಯಲ್ಲಿ ಮಹಾರಾಜನಾಗಿದ್ದ ದಶರಥನು ಈ ಕೊರತೆಗೆ ಹೊರತಾದವನಾಗಿರಲಿಲ್ಲ. ಬೇಕಾದಷ್ಟು ಐಶ್ವರ್ಯವಿದ್ದರೂ ಯಾವದೂ ಅವನ ಮನಸ್ಸನ್ನು ವಿನೋದಗೊಳಿಸಲಿಲ್ಲ. ಮಕ್ಕಳಿಲ್ಲವೆಂಬ ಕೊರತೆಯೊಂದೇ ಎಲ್ಲಾ ಬಗೆಯ ರಾಜವೈಭವಗಳ ಆನಂದಕ್ಕೂ ಒಂದು ದೊಡ್ಡ ಮುಸುಕಾಗಿ ತಾನೊಂದು ಮನೋರೋಗವಾಗಿ ದಶರಥನಿಗೆ ದುಃಖವನ್ನುಂಟುಮಾಡಿತು.

## ದಶರಥನು ಪುತ್ರಕಾಮೇಷ್ಟಿಯನ್ನು ಮಾಡಿದ್ದು

ಮಕ್ಕಳಾಗುವದಕ್ಕೇನು ಮಾಡಬೇಕು? ಲೋಕದಲ್ಲಿ ಸಾಮಾನ್ಯವಾಗಿ ಒಬ್ಬ ಹೆಂಡತಿಯಿಂದ ಮಕ್ಕಳಾಗದೆ ಹೋದರೆ ಇನ್ನೊಬ್ಬ ಹೆಂಡತಿಯನ್ನು ಮಾಡಿಕೊಳ್ಳುತ್ತಾರೆ. ದಶರಥನಿಗೆ ಒಬ್ಬಳೇ ಅಲ್ಲದೆ ಮೂವರು ಹೆಂಡಂದಿರಿದ್ದರು. ಇನ್ನೂ ಏನಾದರೂ ಔಷಧಿಯನ್ನು ಕೊಡಿಸುವದೆಂಬ ಒಂದು ಬಗೆಯ ಲೌಕಿಕವಾದ ಉಪಾಯವು ನಮ್ಮ ನಡವಳಿಕೆಯಲ್ಲಿರುವದು. ಆದರೆ ಇಂಥ ಕಲ್ಪನೆ ಕೂಡ ದಶರಥನ ಮನಸ್ಸಿಗೆ ಬಂದಿತ್ತೆಂದು ಹೇಳುವದಕ್ಕಾಗುವದಿಲ್ಲ. ಏಕೆಂದರೆ ಜಗನ

ಕಾಲದ ಜನರ ಮನಸ್ಸು ಲೌಕಿಕವಾದ ಉಪಾಯಗಳ ಕಡೆಗೆ ನಮ್ಮಷ್ಟು ಹರಿಯುತ್ತಿರಲಿಲ್ಲ. ನಾವು ಕಲಿಯುಗದವರು. ದಶರಥನಿದ್ದದ್ದು ತ್ರೇತಾಯುಗ. ನಾಲ್ಕುಪಾದಗಳುಳ್ಳ ಧರ್ಮಪುರುಷನು ಈ ನಮ್ಮ ಕಾಲದಲ್ಲಿ ಮೂರು ಪಾದಗಳನ್ನು ಮುರಿದುಕೊಂಡು ಒಂದೇ ಪಾದದಲ್ಲಿ ನಿಂತಿರುವನೆಂದು ಗ್ರಂಥಕಾರರು ವರ್ಣಿಸಿರುವರು. ಈಗ ಒಂಟಿಗಾಲಿನವನಾಗಿರುವ ಧರ್ಮಪುರುಷನು ತ್ರೇತಾಯುಗದಲ್ಲಿ ಮೂರುಕಾಲಿನವನಾಗಿರಬೇಕಾಯಿತು. ಇದರಿಂದ ತೋರುವದೇನೆಂದರೆ ಆಗಿನ ಕಾಲದವರ ಧರ್ಮದೃಷ್ಟಿಯು ನಮ್ಮದರ ಮೂರರಷ್ಟಿತ್ತು. ಆದ್ದರಿಂದ ಅವನು ಪ್ರತಿಯೊಂದು ಸಂದರ್ಭದಲ್ಲಿಯೂ ಧರ್ಮಕ್ಕೇ ಶರಣುಹೋಗುತ್ತಿದ್ದನು. ಈಗ ಧರ್ಮವು ಏಕಪಾದಖಂಡಲಾದರೂ ಇರುವದರಿಂದಲೇ ಈಗಿನವರಲ್ಲಿಯೂ ಎಷ್ಟೋ ಜನರು ಸಂತಾನಾರ್ಥವಾಗಿ ದೇವರಿಗೆ ಬಗೆಬಗೆಯ ಹರಿಕೆಗಳನ್ನು ಹೊರುವದೋ, ಅಶ್ವತ್ಥ ಪ್ರದಕ್ಷಿಣೆಗಳನ್ನು ಮಾಡುವದೋ, ಸತ್ಯನಾರಾಯಣವ್ರತವನ್ನು ಹಿಡಿಯುವದೋ—ಹೀಗೆ ಯಾವದಾದರೊಂದು ಧರ್ಮವನ್ನು ಆಶ್ರಯಿಸುವರು. ಇನ್ನು ತ್ರೇತಾಯುಗದವರ ಮಾತನ್ನು ಹೇಳಬೇಕಾದ್ದೇನು? ಅದರಲ್ಲಿಯೂ ಸರ್ವಸಂಪತ್ಸಮೃದ್ಧಿಯುಳ್ಳ ದಶರಥನ ವಿಷಯವಂತು ನಮ್ಮ ಕಲ್ಪನೆಗೆ ನಿಲುಕದಂಥದ್ದೇ ಸರಿ. ಸತ್ಯನಾರಾಯಣವ್ರತ ಮೊದಲಾದವುಗಳು ಕೇವಲ ಬಡವರಿಗೆ ಕೂಡ ಮಾಡುವದಕ್ಕೆ ಬರುವಂತೆ ಸುಲಭಸಾಧ್ಯವಾದವುಗಳು. ವೇದದಲ್ಲಿ ಪುತ್ರಕಾಮೇಷ್ಟಿ ಎಂಬದೊಂದು ಕರ್ಮವನ್ನು ಹೇಳಿದೆ. ಮಕ್ಕಳನ್ನು ಬಯಸುವವರೇ ಈ ಕರ್ಮವನ್ನು ಮಾಡತಕ್ಕದ್ದು. ಇದು ಅಂಥಿಂಥವರಿಗೆ ದಕ್ಕುವ ಮಾತಲ್ಲ. ದಶರಥನಂಥ ಮಹಾರಾಜರಿಗೆ ಮಾತ್ರ ಇದು ಸಾಧ್ಯ.

ವಾಚಕರೇ, ವಿಚಾರಮಾಡಿರಿ. ಮಕ್ಕಳಾಗದೆ ಇರುವದಕ್ಕೆ ಕಾರಣವೇನು? ಲೋಕದಲ್ಲಿ ಸುಖಕ್ಕೆ ಪುಣ್ಯವೂ ದುಃಖಕ್ಕೆ ಪಾಪವೂ ಕಾರಣವೆಂದು ಸಾಮಾನ್ಯವಾದ ನಿಯಮವಿದೆ. ಆದ್ದರಿಂದ ಮಕ್ಕಳಿಲ್ಲವೆಂಬ ದುಃಖಕ್ಕೆ ಒಂದು ಪಾಪವು ಕಾರಣವಾಗಿರಬೇಕು. ಆ ಪಾಪವು ಈ ಜನ್ಮದಲ್ಲಿ ಮಾಡಿದ್ದಲ್ಲದಿದ್ದರೂ ಪೂರ್ವಜನ್ಮದಲ್ಲಿ ಮಾಡಿ

ದ್ದಾಗಿ ಅದು ಈಗ ತನ್ನ ಫಲವನ್ನು ತೋರಿಸುವದಕ್ಕೆ ಬಂದು ಸಂತಾನವಾಗದಂತೆ ಅಷ್ಟನಿಂತಿರಬೇಕು. ನಮ್ಮ ಲೌಕಿಕದೃಷ್ಟಿಯು ಅದರ ನಿಜವನ್ನು ತಿಳಿಯುವದಕ್ಕೆ ಅಷ್ಟುದೂರ ಹೋಗಲಾರದು. ನಮ್ಮ ಪೂರ್ವದ ಋಷಿಗಳು ಜ್ಞಾನದೃಷ್ಟಿಯಿಂದ ಇಂಥ ಕಾರಣಗಳನ್ನು ಎಷ್ಟೋ ವೇಳೆ ಕಂಡುಹಿಡಿದಿರುವ ಉದಾಹರಣೆಗಳು ನಮ್ಮ ಪೂರ್ವಿಕರ ಗ್ರಂಥಗಳಲ್ಲಿ ಬೇಕಾದಷ್ಟಿರುವವು. ಒಮ್ಮೆ ದುಷ್ಯಂತನು ಕಾಮಧೇನುವಿಗೆ ಸತ್ಕಾರವನ್ನು ಮಾಡದೆ ಹೋದ ದೋಷವು ಅವನ ಸಂತಾನವೃದ್ಧಿಗೆ ಪ್ರತಿಬಂಧಕವಾಗಿರುವದೆಂದು ವಸಿಷ್ಠರು ಕಂಡುಹಿಡಿದದ್ದು ರಘುವಂಶಗ್ರಂಥದಲ್ಲಿ ಉಲ್ಲೇಖಿತವಾಗಿರುವದು. ಅವರ ಹಾಗೆ ಅದನ್ನು ಸಾಕ್ಷಾತ್ತಾಗಿ ಕಾಣುವ ಯೋಗ್ಯತೆ ನಮಗೆ ಇಲ್ಲದಿದ್ದರೂ ಪರಮಸಾತ್ತ್ವಿಕರಾದ ಅವರ ಪವಿತ್ರ ರಕ್ತದ ಕಣಗಳು ಇನ್ನೂ ನಮ್ಮ ರಕ್ತನಾಳಗಳಲ್ಲಿ ದಣದಣನೆ ಧುಮುಕುತ್ತಿರುವದರಿಂದ ನಾವು ಆಸ್ತಿಕರಾಗಿ ಅವರ ಮತವನ್ನು ಒಪ್ಪಲೇ ಬೇಕು. ಒಂದುಪಕ್ಷ ನಾವು ಹೆಮ್ಮೆಯಿಂದ ಅವರ ಮಾತಿಗೆ ಉಪ್ಪು ಹಾಕದೆ ಹೋದರೂ ಅವರ ಮಾತಿನ ನಿಜತ್ವಕ್ಕೇನೂ ಕೊರತೆ ಇಲ್ಲ. ಮಕ್ಕಳಾಗುವದಕ್ಕೆ ನಿಜವಾಗಿ ಪಾಪವೇ ಅಡ್ಡಬಂದಿರುವದು. ಆ ಪಾಪವನ್ನು ಅದಕ್ಕಿಂತ ಬಲವಾದ ಪುಣ್ಯದಿಂದಲೇ ಗೆಲ್ಲಬೇಕು. ಮೂವರು ಹೆಂಡಿರಿದ್ದರೂ ಮಕ್ಕಳಾಗದೆ ಇರಬೇಕಾದರೆ ದಶರಥನಿಗೆ ಅಡ್ಡಬಂದಿದ್ದ ಪಾಪವು ಎಷ್ಟು ಮಹತ್ತರವಾಗಿರಬಹುದು? ಅದಕ್ಕೆ ಪುತ್ರಕಾಮೇಷ್ಟಿಯೇ ತಕ್ಕ ಮದ್ದು. ಏಕೆಂದರೆ ಪುತ್ರಕಾಮೇಷ್ಟಿಯು ಫಲವು ಎಂಥ ಮಹತ್ತರವಾದ ಪಾಪವನ್ನಾದರೂ ಹಿಮ್ಮೆಟ್ಟಿಸುವಂಥ ಪುಣ್ಯವಾಗಿರುವದು.

ದಶರಥನ ಆ ಮಹಾದುಃಖವನ್ನು ಕಳೆಯುವದಕ್ಕೆ ಪುತ್ರಕಾಮೇಷ್ಟಿಯೇ ತಕ್ಕದ್ದೆಂದು ನಿಶ್ಚಯಿಸಿ ಆ ರಾಜನ ಪುರೋಹಿತರಾದ ವಸಿಷ್ಠ ಮಹರ್ಷಿಗಳು ಅದಕ್ಕೆ ತಕ್ಕವರನ್ನೆಲ್ಲಾ ಕರೆಸಿ ಶಾಸ್ತ್ರದಲ್ಲಿ ಹೇಳಿರುವ ನಿಯಮಗಳಿಗೆ ಯಾವ ಕೊರತೆಯೂ ಬರದಂತೆ ಬಹು ಸಂಭ್ರಮದಿಂದ ಆ ಕರ್ಮವನ್ನು ಸಾಂಗವಾಗಿ ಮಾಡಿಸಿದರು. ಶಿಶು

ತನದಲ್ಲಿ ಬಾಲಲೀಲೆಗಳಿಂದ ವಿನೋದಗೊಳಿಸುತ್ತ, ಕುಮಾರಾವಸ್ಥೆಯಲ್ಲಿ ವಂಶಾನುರೂಪವಾದ ವಿದ್ಯೆಯಲ್ಲಿ ನೈಪುಣ್ಯವನ್ನು ಪಡೆದು ಸಂತೋಷವನ್ನುಂಟುಮಾಡುತ್ತ, ಯೌವನದಲ್ಲಿ ತಂದೆಯು ತಲೆಯ ಮೇಲಿನ ಭಾರವನ್ನೆಲ್ಲಾ ತನ್ನ ತಲೆಯ ಮೇಲಕ್ಕೆ ಇಳಿಸಿಕೊಂಡು ಹಿರಿಯರಿಗೆ ವಿಶ್ರಾಂತಿಯನ್ನುಂಟುಮಾಡುವಂಥ ಮಕ್ಕಳಾಗುವದಕ್ಕಾಗಿ ಮಾಡಿದಂಥ ಆ ಮಹಾಯಾಗವನ್ನು ದಶರಥರಾಯನು ಎಷ್ಟು ವಿಜೃಂಭಣೆಯಿಂದ ಮಾಡಿರಬಹುದು! ಆಗ ಎಷ್ಟು ಜನ ಬಡಬಗ್ಗರಿಗೆ ಅನ್ನದಾನವನ್ನು ಮಾಡಿರಬಹುದು! ವಿದ್ವಾಂಸರು, ವಿದ್ಯಾರ್ಥಿಗಳು—ಮೊದಲಾದ ಎಷ್ಟು ಜನರಿಗೆ ಎಷ್ಟು ಮಟ್ಟಿಗೆ ಸಂಭಾವನೆಗಳನ್ನು ಕೊಟ್ಟಿರಬಹುದು! ಇದನ್ನು ಬರೀ ಕಲ್ಪನೆಯಿಂದ ಉಲ್ಲೇಖಿಸುವದಕ್ಕೆ ಆಗುವದಿಲ್ಲ. ನಾವು ನಮ್ಮ ಮನಸ್ಸನ್ನೆಲ್ಲಾ ಹಿಗ್ಗಿಸಿ ಉದಾರತ್ವದ ಪರಮಾವಧಿಯನ್ನು ವರ್ಣಿಸಿದರೂ ಅದು ದಶರಥರಾಯನ ಉದಾರತೆಯನ್ನು ನಿಲುಕಿಸಿಕೊಳ್ಳಲರಿಯದು. ಏಕೆಂದರೆ ದೊಡ್ಡವರ ಉದಾರತೆ ದೊಡ್ಡವರಿಗೆ ಮಾತ್ರ ಗೊತ್ತು.

ಒಳ್ಳೇದು. ಧರ್ಮವು ಈಗಿನ ಕಾಲಕ್ಕಿಂತ ನೂರರಷ್ಟು ಹೆಚ್ಚಾಗಿದ್ದ ತ್ರೇತಾಯುಗದ ದಶರಥರಾಯನು ಕಲಿಯುಗದವರ ಹಾಗೆ ಮಕ್ಕಳಿಂದ ತನಗಾಗುವ ಪ್ರಾಪಂಚಿಕಸುಖವನ್ನು ಅಷ್ಟೇಕೆ ಹಂಬಲಿಸಿಕೊಂಡನೆಂದೂ ಈ ಪ್ರಾಪಂಚಿಕಸುಖವನ್ನು ಪಡೆಯುವ ಉಪಾಯವನ್ನು ಹೇಳುವದಕ್ಕೆ ವೇದವೇಕೆ ಹೊರಟಿತೆಂದೂ ನೀವು ಯೋಚಿಸಬಹುದು. ಇಲ್ಲಿ ನಮ್ಮ ವಿಚಾರದೃಷ್ಟಿಯನ್ನು ಸ್ವಲ್ಪ ಮುಂದುವರಿಸಿದರೆ ಈಗಿನ ಕಾಲದ ಜನರಿಗೂ ದಶರಥರಾಯನಿಗೂ ವ್ಯತ್ಯಾಸವುಂಟೆಂದೂ ಮತ್ತು ಈ ಮಾತಿಗೆ ವೇದವು ಕೈಹಾಕಿರುವದಕ್ಕೆ ಕಾರಣವೂ ಇರುವದೆಂದೂ ತೋರುವದು. ತಮಗಾಗುವ ಪ್ರಾಪಂಚಿಕ ಸುಖಕ್ಕಾಗಿ ಮಕ್ಕಳನ್ನು ಬಯಸುವದೆಂಬ ಮಾತು ಎಲ್ಲಾ ಯುಗದಲ್ಲಿಯೂ ಕಾಣುವದು; ಆದರೆ ಮಕ್ಕಳಾಗುವದಕ್ಕೆ ಇಷ್ಟೇ ಪ್ರಯೋಜನವಲ್ಲ. ಇಷ್ಟೇ ಆಗಿದ್ದರೆ ಈ ಮಾತಿಗೆ ವೇದವು ಬಾಯಿಹಾಕುತ್ತಿರಲಿಲ್ಲ. ಇದಕ್ಕಿಂತ ಹೆಚ್ಚಿನದುಂಟು. ಪ್ರತಿಯೊಬ್ಬ

ಗೃಹಸ್ಥನೂ ತನ್ನ ವಂಶಕ್ಕೂ ತನ್ನ ಜನಾಂಗಕ್ಕೂ ಅನುರೂಪವಾದ ಸಂತತಿಯನ್ನು ಪಡೆಯುವದಕ್ಕೆ ಬದ್ಧನಾಗಿರುತ್ತಾನೆ. ಹಾಗೆ ಮಾಡದೆ ಹೋದರೆ ಅವನ ವಂಶದವರಿಂದ ಸಾಗುತ್ತಿದ್ದ ದೇವತಾಕಾರ್ಯಗಳೂ ಲೋಕೋಪಕಾರಗಳೂ ನಿಂತು ಹೋಗುವದರಿಂದ ಪ್ರಪಂಚದ ವ್ಯವಸ್ಥೆಯೇ ಕೆಟ್ಟುಹೋದೀತು.

ಈಚಿನವರು ಸಂತಾನಾಭಿವೃದ್ಧಿಶಾಸ್ತ್ರವೆಂಬದೊಂದು ಶಾಸ್ತ್ರವನ್ನು ಹುಟ್ಟುಗಟ್ಟಿಕೊಂಡಿರುವರು. ಕುರುಡರು, ಕುಂಟರು, ದೃಢಾಂಗವಿಲ್ಲದವರು—ಮೊದಲಾದವರಿಗೆ ಮದುವೆಯಾಗಿ ಮಕ್ಕಳು ಹುಟ್ಟಿದರೆ ಆ ಪರಂಪರೆಯಲ್ಲೆಲ್ಲಾ ಆ ನ್ಯೂನತೆಗಳು ಅಂಟಿಕೊಂಡು ವಂಶವು ಕೆಡುತ್ತ ಬರುವದರಿಂದ ಅವರಿಗೆ ಮದುವೆಯಾಗುವ ಅವಕಾಶವನ್ನೇ ಕೊಡಬಾರದೆಂದೂ ಸಾಧ್ಯವಾದರೆ ಅಂಥವರನ್ನೆಲ್ಲಾ ಇಲ್ಲದಂತೆ ಮಾಡಿಬಿಡುವದೇ ಸರ್ವೋತ್ತಮವೆಂದೂ ಅವರ ಅಭಿಪ್ರಾಯ. ಹೆಚ್ಚು ವಿಚಾರಮಾಡದೆ ಇರುವಾಗ ಈ ಯುಕ್ತಿಯು ಚೆನ್ನಾಗಿಯೇ ಕಾಣಬಹುದು; ದೂರದೃಷ್ಟಿಯನ್ನುಪಯೋಗಿಸಿದಾಗ ಈ ಮಾತು ನಿಲ್ಲುವದಿಲ್ಲ. ಕುರುಡತನ, ಕುಂಟತನ—ಮೊದಲಾದ ಅಂಗಹೀನತೆಗಳಿಗೆಲ್ಲಾ ಅವರವರ ಪೂರ್ವಕರ್ಮವೇ ಕಾರಣವೆಂದು ನಮ್ಮವರು ಗೊತ್ತುಮಾಡಿರುವರು. ಕುರುಡರೂ ಕುಂಟರೂ ಆಗದೆ ಇರಬೇಕಾದರೆ ಪಾಪಕರ್ಮವನ್ನು ಮಾಡದೆ ಇರಬೇಕು. ಲೋಕದಲ್ಲಿ ಎಲ್ಲೆಲ್ಲಿಯೂ ಧಾರ್ಮಿಕವರ್ತನವನ್ನು ಹಬ್ಬಿಸಿಬಿಟ್ಟರೆ ಅಂಗಹೀನರು ಹುಟ್ಟುವದಕ್ಕೇ ಕಾರಣವಿರುವದಿಲ್ಲ. ಹಾಗೆ ಮಾಡದೆ ಈಗ ಇರುವ ಅಂಗಹೀನರನ್ನೆಲ್ಲಾ ಇಲ್ಲದಂತೆ ಮಾಡಿಬಿಟ್ಟರೆ ಇನ್ನುಮುಂದೆ ಅಂಗಹೀನರು ಹುಟ್ಟುವದೇ ಇಲ್ಲವೆಂದು ಹೇಳುವದಕ್ಕಾದೀತೆ? ಅಂಗಪುಷ್ಟಿಯುಳ್ಳ ದಂಪತಿಗಳಿಂದಲೇ ಪಾಪಫಲವಾಗಿ ಅಂಗಹೀನರಾದ ಮಕ್ಕಳು ಹುಟ್ಟಬಹುದು. ಆದ್ದರಿಂದ ವಂಶಕ್ಕೆ ಅನುರೂಪವಾದ ಸತ್ಸಂತತಿಯು ಹುಟ್ಟಬೇಕಾದರೆ ಸ್ಥೂಲವಾಗಿ ಕಾಣುವದರಲ್ಲಿಯೇ ಬುದ್ಧಿಯನ್ನು ಹರಿಸುವವರು ಹೇಳುವಂಥ—ಅಂಗಹೀನರನ್ನೆಲ್ಲಾ ಇಲ್ಲದಂತೆ ಮಾಡುವದೆಂಬ—ಲೌಕಿಕವಾದ ಉಪಾಯವೇನೂ ಕಾರ್ಯಕಾರಿಯಲ್ಲ. ಆದ

ಕಾರಣ ಈ ಉಪಾಯವನ್ನು ತಿಳಿದು ಹೇಳುವ ಭಾರವು ದಿವ್ಯಜ್ಞಾನಿಗಳಾದ ಮಹರ್ಷಿಗಳ ಮೇಲೆ ಬಿತ್ತು. ಆದ್ದರಿಂದ ವೇದವು ಧರ್ಮದೃಷ್ಟಿಯಿಂದ ಸಂತತ್ಯರ್ಥವಾದ ಯಾಗವನ್ನುಪದೇಶಮಾಡಿರುವದು. ಈ ದೃಷ್ಟಿಯು ಈಗ ನಮಗೆ ಇಲ್ಲದಿದ್ದರೂ ಹಿಂದೆ ದಶರಥರಾಯನಿಗೂ ಇರಲಿಲ್ಲವೆಂದು ಹೇಳುವದು ಬಹು ಸಾಹಸದ ಮಾತು. ದಶರಥರಾಯನು ಸೂರ್ಯವಂಶದ ರಾಜನು. ಈ ವಂಶದಲ್ಲಿ ಹಿಂದೆ ಆಳಿದಂಥ ರಾಜರುಗಳೆಲ್ಲಾ ಧರ್ಮಕ್ಕೆ ಕಟ್ಟುಬಿದ್ದವರೇ ಆಗಿದ್ದು ಒಂದು ಕೂದಲೆಳೆಯಷ್ಟಾದರೂ ಧರ್ಮವನ್ನು ಮೀರಿ ನಡೆಯದಂಥವರಾಗಿದ್ದರಲ್ಲದೆ ಆ ಎಷ್ಟೋ ಜನ ಮಹಾರಾಜರ ಕೀರ್ತಿಚಂದ್ರಿಕೆಯು ನಮ್ಮ ಭಾರತೀಯರ ಹೃದಯಾಕಾಶದಲ್ಲಿ ಇನ್ನೂ ಅಮೃತಕಿರಣಗಳಿಂದ ಬೆಳಗುತ್ತಿರುವದು. ಅಂಥ ವಂಶವು ಅಲ್ಲಿಗೇ ಮುಕ್ಕುಹೋಗುವದೆಂದರೆ ದಶರಥನ ದುಃಖಕ್ಕೆ ಪಾರವುಂಟೆ? ಅಪಯಶಸ್ಸಿಗೆ ಅವಕಾಶವನ್ನು ಕೊಡುವದಕ್ಕೆ ವಿವೇಕಿಯಾದವನು ಯಾವನು ತಾನೆ ಒಪ್ಪುತ್ತಾನೆ? ಆದ್ದರಿಂದ ದಶರಥರಾಯನು ತನ್ನ ಸರ್ವಪ್ರಯತ್ನಗಳಿಂದಲೂ ಆ ಇಷ್ಟಿಯನ್ನು ಸಾಂಗವಾಗಿ ಪೂರ್ಣಮಾಡಿದನು.

## ಭರತನ ಹುಟ್ಟು

ಲೋಕದಲ್ಲಿ ಸಂತಾನ ಮೊದಲಾದ ಬಯಕೆಗಳಿಂದ ಕರ್ಮವನ್ನು ಮಾಡುವಂಥವರು ಆ ಕರ್ಮದ ನಿಯಮಗಳನ್ನೆಲ್ಲಾ ಅನುಸರಿಸುತ್ತೇವೆಂದೇ ಸಂಕಲ್ಪಮಾಡಿರುತ್ತಾರೆ. ಆದರೆ ಪಾಪ, ಅವರೇನು ಮಾಡಿಯಾರು! ಕರ್ಮದ ನಿಯಮಗಳು ಬಹು ಉಗ್ರವಾಗಿರುವವು. ಕರ್ಮಕ್ಕೆ ಕೈಹಾಕದಿರೋಣವೆಂದರೆ ಬಯಕೆಯೆಂಬ ಉಳಿಯು ತನ್ನ ಮೊನೆಯಾದ ತುದಿಯಿಂದ ಮನಸ್ಸನ್ನು ಕೊರೆಯುತ್ತಿರುವದು. ಎಲ್ಲಾನಿಯಮಗಳನ್ನೂ ಅನುಸರಿಸೋಣವೆಂದರೆ ಅದಕ್ಕೆ ತಕ್ಕ ಸೌಕರ್ಯಗಳಿರುವದಿಲ್ಲ. ಆದರೂ ಕೆಲವು ಜನರು ಸಾಧ್ಯವಾದಷ್ಟಾದರೂ ನಡೆಸುವರು. ಇದು ಹೆಚ್ಚಿನ ಶ್ರದ್ಧೆಯುಳ್ಳವರ ಮಾತು. ಇನ್ನು ಹೇಗೋ ಕರ್ಮವನ್ನು ಮಾಡಿ ಮುಗಿಸಿದರೆ ಸರಿಯೆಂಬವರು ನಿಯಮ

ಗಳ ಜಗಿಯು ಕಡೆಗೆ ಕಣ್ಣು ಹಾಕದೆ ಅಂತೂ ಕರ್ಮವಾಯಿತೆನ್ನಿಸಿ ಬಿಡುವರು. ಹೇಗೇ ಮಾಡಲಿ; ಇಂಥ ಕಲಿಯುಗದಲ್ಲಿಯೂ ಕೂಡ ಎಷ್ಟೋ ಸಂದರ್ಭಗಳಲ್ಲಿ ಈ ಬಗೆಯ ಕರ್ಮಗಳೂ ಫಲಿಸುತ್ತಿರುವವು. ಮುಂದೆಯೂ ಇದು ಹೀಗೆಯೇ ನಡೆಯುವದೆಂಬ ವಿಷಯದಲ್ಲಿಯೂ ಸಂಶಯವಿಲ್ಲ. ಏಕೆಂದರೆ ಭಗವಂತನು ತನಗೆ ತನ್ನ ಪ್ರಜೆಗಳು ದೂರ ವಾಗಲೆಂದು ಇಚ್ಛಿಸುವದಿಲ್ಲ. ಭಗವಂತನಿಗೆ ದೂರವಾಗುವದೆಂದರೆ ವಿಷಯಗಳೇ ನಮ್ಮ ಸರ್ವಸ್ವನೆಂದು ಭಾವಿಸುವದು. ವಿಷಯಗಳು ಒಮ್ಮೆ ಸುಖವನ್ನೂ ಒಮ್ಮೆ ದುಃಖವನ್ನೂ ಕೊಡತಕ್ಕವುಗಳೆಂಬುದು ನಮ್ಮೆಲ್ಲರ ಅನುಭವದಲ್ಲಿಯೂ ಇರುವದು. ಇಂಥ ವಿಷಯಗಳನ್ನು ನಂಬಿ ಪ್ರಜೆಗಳು ಒಂದು ಗಳಿಗೆ ಅಳುತ್ತಲೂ ಒಂದು ಗಳಿಗೆ ನಗುತ್ತಲೂ ಇರುತ್ತಿದ್ದರೆ ಭಗವಂತನಿಗೆ ಅದು ಹೇಗೆ ಚೆನ್ನಾಗಿ ಕಂಡೀತು? ಭಗವಂತನು ತಂದೆಯಂತೆ; ಮನುಷ್ಯರೆಲ್ಲರೂ ಅವನ ಮಕ್ಕಳಂತೆ. ಮಕ್ಕಳು ಸುಖದುಃಖಗಳೆಂಬ ಸುಳಿಗಳಲ್ಲಿ ಸಿಕ್ಕಿ ಹೊಯ್ದಾಡುತ್ತಿರುವದನ್ನು ಕಂಡರೆ ಎಂಥ ಕಟುಕನಾದ ತಂದೆಗೆ ತಾನೆ ಸೇರಿಕೆಬರುವದು? **"ಪುತ್ರಾದಿಚ್ಛೇತ್ಪರಾಜಯಂ"** ಎಂಬ ವಚನದಂತೆ ಮಕ್ಕಳು ಸುಖಸಮೃದ್ಧಿಯಲ್ಲಿ ತನ್ನನ್ನು ಮೀರಿಸುವವರಾಗಬೇಕೆಂದು ಬಯಸುವದು ತಂದೆಗೆ ಸ್ವಭಾವವಾಗಿರುವದು. ಹೀಗಿರುವಾಗ ಜನರೆಲ್ಲರೂ ಸುಖಕ್ಕಾಗಿ ವಿಷಯಗಳ ಮುಂದೆ ಜೋಳಿಗೆಯನ್ನು ಹಿಡಿದು ಹಿಡಿದು ದೀನರಾಗಿ ನಿರಾಶರಾಗಿ ನಿಟ್ಟುಸಿರು ಬಿಡುತ್ತಿರುವದು ಭಗವಂತನಿಗೆ ಹೇಗೆ ಸೊಗಸೀತು? ಹಾಗಾದರೆ ಹೊರಗಣ ಪ್ರಪಂಚವನ್ನು ಸೃಷ್ಟಿಮಾಡುವದರಲ್ಲಿ ಭಗವಂತನ ಉದ್ದೇಶವೇನಿರಬಹುದು? ತನ್ನ ಪ್ರಜೆಗಳಿಗೆ ಸುಖವೂ ದುಃಖವೂ ಉಂಟಾಗುತ್ತಿರಲೆಂದಿರಬಹುದೇ? ಹೀಗೆ ತಾಯಿಯೇ ವಿಷವನ್ನು ಹಾಕುವವಳಾದರೆ ಮಕ್ಕಳು ಬದುಕವದು ಹೇಗೆ? ತಾನು ಅಖಂಡಾನಂದಸ್ವರೂಪನಾಗಿ ತನ್ನ ಪ್ರಜೆಗಳಿಗೆ ದುಃಖಮಿಶ್ರಿತವಾದ ಕ್ಷಣಿಕಸುಖವನ್ನು ಮಾತ್ರ ಕೊಟ್ಟು ಆ ಬರೀ ಆಸೆಯನ್ನು ಹಚ್ಚಿ ಮೋಸಮಾಡುವ ಉದ್ದೇಶವು ಅವನಿಗೆಂದಿಗೂ ಇರಲಾರದು. ನಾವು ಸಹಜವಾಗಿ ಕ್ಷುದ್ರಬುದ್ಧಿಯವರಾದ್ದರಿಂದ ನಮಗೆ ಇಂಥ

ಕಲ್ಪನೆಗಳು ಬರುವವು. ಸೃಷ್ಟಿಯ ವಿಚಾರವನ್ನೆಲ್ಲಾ ಚೆನ್ನಾಗಿ ಪರಿಶೀಲನೆಮಾಡಿದಂಥವರು ಹೇಳುವದೇನೆಂದರೆ— ಹೊರಗಡೆಗೆ ಮುಂದುವರಿಯುವದೇ ಇಂದ್ರಿಯಗಳ ಹುಟ್ಟುಗುಣ; ಆ ರೀತಿಯಲ್ಲಿ ಹೊರಗೆ ಹರಿದು ಹೋಗಿ ತಡಕಿನೋಡಿ ಅಲ್ಲಿ ಸುಖವಿಲ್ಲವೆಂದು ಮನಗಂಡು ಹಿಂದಿರುಗಿದಾಗ ಆತ್ಮಾನಂದದ ಬೆಲೆ ತಿಳಿಯಬರುವದೆಂದು ಯೋಚಿಸಿ ಜನರ ವಿರಕ್ತಿಗೆ ಸಾಧನವಾಗಿರುವಂತೆ ಭಗವಂತನು ಈ ಪ್ರಪಂಚವನ್ನು ಸೃಷ್ಟಿಮಾಡಿರುವನು. ಆದ್ದರಿಂದ ಹೊರಗಣ ಪ್ರಪಂಚದಲ್ಲಿ ಹುರುಳಿಲ್ಲವೆಂದು ತಿಳಿದು ಮನಸ್ಸನ್ನು ಆತ್ಮನ ಕಡೆಗೆ ತಿರುಗಿಸುವದು ಜಾಣತನ; ಹಾಗೆ ಮಾಡದೆ ಅದರಲ್ಲಿಯೇ ಅನುರಕ್ತನಾಗಿ ಅದರ ಮುಂದೆ ನಾಲಿಗೆಯನ್ನು ನೀಡಿಕೊಂಡು ಕುಳಿತರೆ ಅದು ನಮ್ಮ ದಡ್ಡತನವಲ್ಲದೆ ಮತ್ತೇನು? ಆದರೂ ಕುರುಡುಗಣ್ಣಿಗಿಂತ ಮೆಳ್ಳಗಣ್ಣು ಶ್ರೇಷ್ಠವೆಂಬಂತೆ ವಿಷಯಗಳನ್ನು ಅನುಭವಿಸುವ ಸಡಗರದಲ್ಲಿ ತನ್ನನ್ನು ಸಂಪೂರ್ಣವಾಗಿ ಮರೆಯುವವರಿಗಿಂತಲೂ ವಿಷಯಸುಖದ ಬಯಕೆಯಿಂದಾದರೂ ತನಗೆ ಶರಣು ಬಂದರೆ ಅವರಿಗೆ ಆ ಇಷ್ಟವನ್ನು ಪೂರ್ತಿಮಾಡಿ ಆ ಮೂಲಕ ಮೆಲ್ಲಮೆಲ್ಲಗೆ ಅವರನ್ನು ತನ್ನ ಕಡೆಗೆ ಬರಮಾಡಿಕೊಳ್ಳಬೇಕೆಂಬುದು ಭಗವಂತನ ಉದ್ದೇಶ. ಒಬ್ಬ ಚಕ್ರವರ್ತಿಯ ಮಗನು ಕಣ್ಣೀರಿಡುತ್ತ ತಂದೆಯ ಬಳಿಗೆ ಬಂದು ಒಂದು ಬೋಕಿಯ ಚೂರನ್ನು ಕೊಡೆಂದು ಅಂಗಲಾಚಿಕೊಂಡರೆ ಅದನ್ನು ಕೊಡುವದು ಆ ರಾಜನಿಗೊಂದು ಭಾರವಾದೀತೆ? ಆದ್ದರಿಂದಲೇ ಕೇಳಿದ ಕೂಡಲೆ ಅವನು ಆ ಚೂರನ್ನು ಅತ್ತ ಒಗೆದು ಬಿಡುವನು. ಇದು ಆ ರಾಜನಿಗೆ ಭಾರವೆನಿಸದಿರುವದಿಷ್ಟೇ ಅಲ್ಲ; ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನ ಮನಸ್ಸು ಇಷ್ಟು ಕ್ಷುದ್ರದ ಕಡೆಗ ಜೋಲುಬಿದ್ದದ್ದಕ್ಕಾಗಿ ಅವನು ಸಂಕಟಪಡುವನು. ಯಾವ ಮಗನು ತನ್ನ ಸರ್ವಸಂಪತ್ತಿಗೂ ಬಾಧ್ಯನೋ ಅವನು ಒಂದು ಬೋಕಿಯ ಚೂರಿಗಾಗಿ ಬಾಯಿಬಾಯಿ ಬಿಡುತ್ತಿದ್ದರೆ ಅದರಿಂದ ಚಕ್ರವರ್ತಿಯ ಮನಸ್ಸಿಗೆ ಅಸಹ್ಯವಾಗುವದೇನಾಶ್ಚರ್ಯ! ಅದರಂತೆಯೇ ಯಾವನಾದರೂ ದೀನನಾಗಿ ವಿಷಯಸುಖಕ್ಕಾಗಿ ದೇವರನ್ನು ಬೇಡಿಕೊಂಡರೆ ಆ ಇಷ್ಟವನ್ನು ಪೂರ್ಣ

ಮಾಡುವದು ಆ ದೇವರಿಗೇನೂ ದೊಡ್ಡ ಮಾತಲ್ಲ. ಆದ್ದರಿಂದ ಅವನು ಆಗಿಂದಾಗಲೇ ಇಂಥ ಇಚ್ಛೆಗಳನ್ನೆಲ್ಲಾ ಪೂರ್ಣಮಾಡಿಬಿಡುವನು. ಆದರೆ ಇಂಥ ಕ್ಷುದ್ರವಿಷಯಕ್ಕೆ ಮನಸ್ಸನ್ನು ಸೋತದ್ದು ಮಾತ್ರ ಅವನ ಮನಸ್ಸಿಗೆ ಬರುವದಿಲ್ಲ. ನಿಷ್ಕಾಮಬುದ್ಧಿಯಿಂದ ಅಂತರ್ಮುಖ ನಾಗಿ ಭಗವಂತನಿಗೆ ಶರಣುಹೊಕ್ಕವನು ತಾನೇ ಅಕ್ಷಯಾನಂದ ಸಾಗರನಾಗುವನು. ಪ್ರತಿಯೊಬ್ಬರೂ ಹೀಗಾಗುವದೇ ಭಗವಂತನಿಗೆ ಬೇಕಾಗಿರುವದು. ಮಹಾಧರ್ಮಿಷ್ಠನಾದ ದಶರಥರಾಯನು ಪುತ್ರ ಕಾಮೇಷ್ಟಿಯಂಥ ಮಹಾಯಾಗವನ್ನು ಮಾಡಿ ಮಕ್ಕಳ ಬಯಕೆ ಯಿಂದ ಸೆರಗೊಡ್ಡಿದರೆ ದೇವರು ಅವನಿಷ್ಟವನ್ನು ಪೂರ್ಣಮಾಡುವ ದೇನು ದೊಡ್ಡ ಮಾತು? ಅಗ್ನಿಕುಂಡದಿಂದ ಯಜ್ಞನಾರಾಯಣನೇ ಸಾಕ್ಷಾತ್ತಾಗಿ ಬಂದು ರೂಪವನ್ನು ವಹಿಸಿ ಬಂದು ಪಾಯಸದ ಪಾತ್ರೆಯೊಡನೆ ಎಲ್ಲರಿಗೂ ಕಾಣಿಸಿಕೊಂಡು ಆ ಪಾಯಸವನ್ನು ಆ ಮಹಾರಾಜನಿಗೆ ಪ್ರಸಾದವಾಗಿ ಕೊಟ್ಟನು. ಹೀಗಾಗುವದು ಈಗಿನ ಕಾಲದ ನಮಗೆ ಅಸಂಭವವೆಂದು ತೋರಿದರೂ ಅದು ತ್ರೇತಾಯುಗದ ಮಾತಾದ್ದರಿಂದಲೂ ವಸಿಷ್ಠರಂಥ ಮತ್ತು ಋಷ್ಯಶೃಂಗರಂಥ ಮಹ ರ್ಷಿಗಳು ಆ ಯಜ್ಞಕಾರ್ಯಗಳನ್ನು ನಿರ್ವಹಿಸಿದ್ದರಾದ್ದರಿಂದಲೂ ಹಾಗೆ ನಡೆದಿರುವದೆಂದು ನಂಬುವದು ಆಸ್ತಿಕನಂಶೀಯರಾದ ನಮಗೆ ಭೂಷಣವಾಗಿರುವದು. ಇರಲಿ. ಆ ಮಹಾಪ್ರಸಾದವನ್ನು ಆ ಮಹಾರಾಜನ ಧರ್ಮಪತ್ನಿಯರು ಅತ್ಯಾದರದಿಂದ ಸೇವಿಸಿದರು. ಅದರ ಪ್ರಭಾವದಿಂದ ಅವರೆಲ್ಲರೂ ಪುತ್ರವತಿಯರಾದರು. ಅವರಲ್ಲಿ ಕಿರಿಯ ಹೆಂಡತಿಯಾದ ಕೈಕೆಯಿಯ ಗರ್ಭದಿಂದ ಆವಿರ್ಭವಿಸಿದ ಪುತ್ರ ರತ್ನದ ವಿಷಯವೇ ಈ ನಮ್ಮ ಗ್ರಂಥದ ಸಂಗತಿ. ಪುತ್ರೋತ್ಪತ್ತಿ ಯಾದ ವಿಷಯವು ಕಿವಿಗೆ ಬಿದ್ದೊಡನೆ ನೀರಿನಲ್ಲಿ ಧುಮುಕಿ ಸ್ನಾನ ಮಾಡುವ ಸಂಪ್ರದಾಯವುಂಟು. ದಶರಥನಿಗೆ ಹಾಗೆ ಧುಮುಕು ವುದಕ್ಕೆ ಅವಕಾಶವೇ ಇರದಂತೆ ಹೃದಯದಿಂದ ಆನಂದವೆಂಬ ಬುಗ್ಗೆಯು ಉಕ್ಕಿ ಅವನನ್ನು ತನ್ನೊಳಗೆ ಮುಳುಗಿಸಿಕೊಂಡದ್ದಲ್ಲದೆ ಹಾಗೆಯೇ ಉಕ್ಕಿ ಉಕ್ಕಿ ಹರಿದು ಭೂಮಂಡಲವನ್ನೆಲ್ಲಾ ವ್ಯಾಪಿಸಿ

ಗೊಂಡು ಬಿಟ್ಟಿತು. ಸಾಮಾನ್ಯರಿಗೆ ಗಂಡುಮಕ್ಕಳಾದರೆ ತಮ್ಮ ಆನಂದವನ್ನು ಸೂಚಿಸುವದಕ್ಕೆ ಮಾತ್ರವೇ ಅಲ್ಲದೆ ಅವನು ಮುಂದೆ ಎಲ್ಲರಿಗೂ ಸಂತೋಷವನ್ನುಂಟುಮಾಡುವವನೆಂದು ಕೂಡ ಸೂಚಿಸುವಂತೆ ಸಕ್ಕರೆಯನ್ನು ಹಂಚುವ ಪದ್ಧತಿಯುಂಟು. ಅದರಂತೆ ಅರಮನೆಯವರು ಆ ಪೂರ್ವಾಚಾರವನ್ನೂ ನಡೆಸಿದರು. ಆದರೆ ಆ ಸಕ್ಕರೆಯ ಮಾಧುರ್ಯವು ಎಷ್ಟು ಮಾತ್ರವೂ ಎದ್ದು ಕಾಣದಷ್ಟು ಸಮಸ್ತ ಪ್ರಜೆಗಳ ಹೃದಯವೂ ಇಂದ್ರಿಯಗಳೂ ಆನಂದದಿಂದ ಮಧುರಮಯವಾಗಿ ಹೋಗಿದ್ದವು. ಈ ಶುಭಸಮಯದಲ್ಲಿ ರಾಜಮರ್ಯಾದೆಗೆ ತಕ್ಕಂತೆ ಅರಮನೆಯಲ್ಲಿ ಮಾತ್ರವೇ ಅಲ್ಲದೆ ದೇಶದಲ್ಲೆಲ್ಲಾ ಅನೇಕಾನೇಕ ಉತ್ಸವಗಳು ನಡೆದವು. ಪುರೋಹಿತರಾದ ವಸಿಷ್ಠಮಹರ್ಷಿಗಳು ಶಿಶುವಿನ ಜಾತಕವನ್ನು ಬರೆದು ಈ ಶಿಶು ಮುಂದೆ ಭೂಮಂಡಲದ ರಕ್ಷಣೆಯ ಕಾರ್ಯದಲ್ಲಿ ಸಮರ್ಥನಾಗುವದೆಂದು ತಿಳಿದು ಆ ಅರ್ಥಕ್ಕನುಗುಣವಾಗಿ ಅದಕ್ಕೆ '**ಭರತ**' ಎಂದು ಹೆಸರಿಟ್ಟರು.

## ಭರತನ ಪ್ರವಾಸ

ಲೋಕದಲ್ಲಿ ಸುಖವಾಗಲಿ ದುಃಖವಾಗಲಿ ಒಂಟಿಯಾಗಿ ಬರುವದು ಕಡಿಮೆ. ದಶರಥಮಹಾರಾಜನಿಗೆ ಭರತನು ಹುಟ್ಟಿದ ಸಮಯದಲ್ಲಿಯೇ ರಾಮ, ಲಕ್ಷ್ಮಣ ಮತ್ತು ಶತ್ರುಘ್ನ- ಎಂಬ ಬೇರೆ ಮೂವರು ಮಕ್ಕಳೂ ಹುಟ್ಟಿದರು. ದಶರಥನು ಆ ಪುತ್ರಕಾಮೇಷ್ಟಿಯಲ್ಲಿ ಇಟ್ಟಿದ್ದಂಥ ಶ್ರದ್ಧೆಗೆ ಇಷ್ಟರ ಮಟ್ಟಿಗೆ ಪುತ್ರಸಮೃದ್ಧಿಯುಂಟಾದದ್ದು ಯೋಗ್ಯವಾಗಿದೆ. ಅಗ್ನಿನಾರಾಯಣನು ತಂದು ಕೊಟ್ಟ ಪಾಯಸರೂಪವಾದ ಮಹಾಪ್ರಸಾದವನ್ನು ಮೂವರು ರಾಜಪತ್ನಿಯರೂ ಭಕ್ತಿಯಿಂದ ಸೇವಿಸಿದ್ದರಾದಕಾರಣ ಆ ಮೂವರ ಗರ್ಭದಲ್ಲಿಯೂ ಪುತ್ರಸಂತತಿಯುತ್ಪನ್ನವಾಯಿತು. ದಶರಥಮಹಾರಾಜನು ಹೊರಗೆ ಕಾಲಿಟ್ಟನೆಂದರೆ ನಾಲ್ಕು ಸಮುದ್ರಗಳ ಮಧ್ಯದಲ್ಲಿರುವ ಭೂಮಂಡಲಕ್ಕೆಲ್ಲಾ ಅಧಿಪತಿಯೆಂದು ಅವನನ್ನು ಲೋಕವೆಲ್ಲಾ ಮನಃಪೂರ್ವಕವಾಗಿ ಹೊಗಳುತ್ತಿತ್ತು. ಆ ರಾಜನು

ಮನೆಗೆ ಬಂದು ತನ್ನ ನಾಲ್ವರು ಪುತ್ರರನ್ನೂ ಕೂಡಿಸಿಕೊಂಡು ಮುದ್ದಿ ಸುತ್ತ ಕುಳಿತನೆಂದರೆ ನಾಲ್ಕು ಪ್ರೇಮದ ಸಮುದ್ರಗಳ ಮಧ್ಯದಲ್ಲಿ ಅಖಂಡಾನಂದರೂಪನಾದ ಸ್ವಾರಾಜ್ಯಲಾಭವನ್ನನುಭವಿಸುವವನಾಗಿ ರುವವನನ್ನು ನೋಡಿ ಪ್ರಜೆಗಳೆಲ್ಲರೂ ಅದನ್ನು ತಮ್ಮ ಕಣ್ಣಿಗೊಂದು ಹಬ್ಬನೆಂದು ತಿಳಿದು ಆನಂದಿಸುತ್ತಿದ್ದರು. ಸಾಮಾನ್ಯವಾಗಿ ಮಕ್ಕಳಿಂ ದಾಗುವಂಥ ಆನಂದಕ್ಕೆ ಲೋಕದಲ್ಲಿ ಎಣೆಯೇ ಇಲ್ಲ. ಅದರಲ್ಲಿಯೂ ಬಹಳ ಹೊತ್ತು ಕಗ್ಗತ್ತಲೆಯಲ್ಲಿದ್ದವರಿಗೆ ಬೆಳಕು ಬಹು ಮಹತ್ತ್ವವದ್ದೆನಿ ಸುವಂತೆ ಬಹುದಿನಗಳಿಂದ ಸಂತಾನವಿಲ್ಲದ ದುಃಖದಿಂದ ಬೆಂದು ಬೆಂ ಡಾದ ಹೃದಯಕ್ಕೆ ಮಕ್ಕಳಿಂದಾಗುವ ಸುಖವು ಬಹು ಮಹತ್ತ್ವವುಳ್ಳದ್ದಾ ಗುವದು. ಮಕ್ಕಳ ಆಲಿಂಗನದ ರುಚಿಯನ್ನು ಕಂಡಮೇಲೆ ದಶರಥ ರಾಜನಿಗೆ ರಾಜವೈಭವವೆಲ್ಲಾ ನಿಸ್ಸಾರವಾಗಿತೋರಿತು. ಆದ್ದರಿಂದ ಅವನು ಆಮೇಲೆ ರಾಜಕಾರ್ಯಗಳ ಕಡೆಗೆ ಲಕ್ಷ್ಯಕೊಡುವು ದನ್ನು ಬಹುಮಟ್ಟಿಗೆ ಕಡಿಮೆಮಾಡಿಬಿಟ್ಟನಲ್ಲದೆ ಮಕ್ಕಳನ್ನು ಬಿಟ್ಟು ಒಂದು ಗಳಿಗೆಯಾದರೂ ಅಗಲಿರಲಾರದಷ್ಟು ಅವರ ಲೀಲೆಗಳಲ್ಲಿ ಆಸ ಕ್ತನಾದನು.

ಈ ನಾಲ್ವರು ಮಕ್ಕಳಲ್ಲಿ— ಅದೇನು ಕಾರಣವೋ ತಿಳಿಯದು— ಹಿರಿಯರಾದ ರಾಮಲಕ್ಷ್ಮಣರಿಬ್ಬರೂ ಒಂದು ಜೊತೆ; ಕಿರಿಯರಾದ ಭರತಶತ್ರುಘ್ನರಿಬ್ಬರೂ ಒಂದು ಜೊತೆ; ಹೀಗೆಯೇ ಸಾಗುತ್ತಿತ್ತು. ಮಕ್ಕಳಾಟಿಕೆಯ ಕಾಲವು ಕಳೆಯುತ್ತ ಬಂದ ಹಾಗೆಲ್ಲಾ ದಶರಥ ರಾಜನು ಮೆಲ್ಲಮೆಲ್ಲಗೆ ಆ ರಾಜಪುತ್ರರಿಗೆ ಅಕ್ಷರಾಭ್ಯಾಸವಾಗುವ ದಕ್ಕೆ ತಕ್ಕ ಸನ್ನಾಹವನ್ನು ಮಾಡಿದನು. ಮಕ್ಕಳ ವಿದ್ಯಾಭ್ಯಾಸ ವೆಂದರೆ ಎಷ್ಟೋ ಗೃಹಸ್ಥರು ಬಹು ಸುಲಭವೆಂದು ತಿಳಿಯುವರು. ನಿಜವಾಗಿ ವಿಚಾರಮಾಡಿದರೆ ಅದರಷ್ಟು ಕಠಿನವಾದ ಕೆಲಸವೇ ಇಲ್ಲ ವೆಂದು ಹೇಳಬಹುದು. ವಿದ್ಯಾಭ್ಯಾಸವೆಂದರೆ ಕೆಲವು ದಿನಗಳ ಹಿಂದಿನ ಕೂಲೀ ಮಠಗಳ ಅಯ್ಯನವರ ಹಾಗೆ ಗಂಟುಹುಬ್ಬಿನಿಂದ ಕೂಡಿದ ಹುಂಕಾರಮಾತ್ರದಿಂದ ಮಕ್ಕಳ ಮೇಲೆ ಮಂಕುದೇವರನ್ನು ಆವಾಹನೆಮಾಡಿ ಕೈ ತೂತುಬೀಳುವವರೆಗೂ ಮಣ್ಣಿನ ಮೇಲೆ ಅಕ್ಷರ

ಗಳನ್ನು ತಿದ್ದಿಸುವದಲ್ಲ. ಹಾಗೆ ಮಾಡುವದು ಉಪಾಧ್ಯಾಯರಿಗೇನೋ ಸುಲಭ; ಮಕ್ಕಳಿಗೆ ಮಾತ್ರ ಅದು ಸುಲಭವೂ ಅಲ್ಲ, ಹಿತವೂ ಅಲ್ಲ. ಈ ಪದ್ಧತಿಯು ಮಕ್ಕಳಿಗೆ ಎಷ್ಟು ಮಾತ್ರವೂ ಉತ್ತಮಸ್ಥಿತಿಯನ್ನು ತಂದುಕೊಡುವಂಥದ್ದಾಗಿರದೆ ಸಂಪೂರ್ಣವಾಗಿ ಹೀನಸ್ಥಿತಿಗಿಳಿದೊಗೆಯುವಂಥದ್ದಾಗಿರುವದು. ಮಕ್ಕಳಿಗೆ ತಮಗೆ ಈಗ ವಿದ್ಯಾಭ್ಯಾಸವಾಯಿತೆಂಬ ಕಲ್ಪನೆ ಕೂಡ ಎಂದಿಗೂ ಬರಲೇ ಬಾರದು. ನಿಜವಾಗಿಯೂ ವಿದ್ಯಾಭ್ಯಾಸಕ್ಕೆ ಆರಂಭವೆಂಬುದೇ ಇಲ್ಲ. ಮಗು ಗರ್ಭದಿಂದ ಭೂಮಿಯ ಮೇಲೆ ಬಿದ್ದೊಡನೆ ಹಸಿವಿನಿಂದ ಅಳುತ್ತದಷ್ಟೆ. ಆಗಲೇ ಹಸಿವೆಯ ತಿಳುವಳಿಕೆಯಾಗುವದರ ಮೂಲಕ ಅದರ ವಿದ್ಯಾಭ್ಯಾಸ ಪ್ರಾರಂಭವಾಯಿತು. ಕಣ್ಣುಬಿಟ್ಟ ಕೂಡಲೆ ಅದು ಹೊರಗಣ ವಿಷಯಗಳನ್ನೆಲ್ಲಾ ಗ್ರಹಿಸುವದಕ್ಕೆ ಮೊದಲುಮಾಡುವದು. ನಮ್ಮ ಗ್ರಂಥಗಳ ಮಾತುಗಳು ಅದಕ್ಕೆ ತಿಳಿಯುವದಿಲ್ಲವೇ ಹೊರತು ಅವುಗಳ ವಿದ್ಯಾಭ್ಯಾಸವೆಂದಿಗೂ ನಡೆಯದೆ ಇರುವದಿಲ್ಲ. ಪಾಠಶಾಲೆಯ ವಿದ್ಯಾರ್ಥಿಗಳಿಗೆ ಭಾನುವಾರ ಮೊದಲಾದ ವಿರಾಮದಿನಗಳುಂಟು. ಮಕ್ಕಳ ವಿದ್ಯಾಭ್ಯಾಸಕ್ಕೆ ವಿರಾಮವೇ ಇರುವದಿಲ್ಲ. ಅದು ಸೃಷ್ಟಿ ವೈಚಿತ್ರ್ಯವನ್ನು ತನ್ನಲ್ಲಿ ತಾನೇ ವಿಮರ್ಶೆ ಮಾಡಿಕೊಳ್ಳುತ್ತ ವಿದ್ಯಾಭ್ಯಾಸದಿಂದ ಆನಂದವನ್ನು ಪಡೆಯುವದು. ಶಾಲೆಯಲ್ಲಿ ನಿರ್ಬಂಧದಿಂದ ಕುಳಿತುಕೊಳ್ಳುವ ವಿದ್ಯಾರ್ಥಿಗಳಿಗೆ ಈ ಆನಂದದ ವಾಸನೆ ಸಿಕ್ಕುವದಿಲ್ಲ. ಆದ್ದರಿಂದ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಮಾಡಿಸುವವರು ಅವರ ಆಟಗಳಲ್ಲೆಲ್ಲಾ ಸೇರಿ ತಾವು ಅವರಿಗೆ ಸುಮ್ಮನೆ ದಾರಿಯನ್ನು ತೋರಿಸುವವರಾಗಿ ಅವರಿಗೆ ಅರಿವಿಲ್ಲದಂತೆ ವಿದ್ಯಾಭ್ಯಾಸವನ್ನು ಮುಂದುವರಿಸಬೇಕು. ಇನ್ನೂ ಅನ್ನವನ್ನೇ ತಿನ್ನದ ಮಕ್ಕಳಿಗೆ ತಾಯಿಯರು ತುಪ್ಪವನ್ನೂ ಸಕ್ಕರೆಯನ್ನೂ ಕಲಸಿ ಅನ್ನವನ್ನು ಮೆತ್ತಗೆ ಮಾಡಿ ಮಗುವನ್ನು ಇತರ ಮಕ್ಕಳೊಡನೆ ಆಡಿಸುತ್ತ "ಆಪಾಡಬುತ್ತಿ, ಕಾಡು ಮಾವಿನಕಾಯಿ, ಓಡಿ ಬಂದುಣ್ಣೋ ರಾಮಣ್ಣಾ" ಎಂದು ಹಾಡುತ್ತ ಊಟವನ್ನು ಒಂದಾಟವಾಗಿ ಮಾಡುವರು. ಹೀಗಾಡುತ್ತ ಅನ್ನದ ರುಚಿ ಹತ್ತಿದ ಮೇಲೆ ಮಗು ತಾನಾ

ಗಿಯೇ ತೆಗೆದುಕೊಂಡು ಉಣ್ಣುವದು. ಅದರಂತೆಯೆ ಗ್ರಂಥರೂಪವಾದ ವಿದ್ಯಾಭ್ಯಾಸವಾಗುವದಕ್ಕೆ ಮೊದಲು ಅದರಲ್ಲಿ ಅಭಿರುಚಿಯುಂಟಾಗುವಂತೆ ಮಕ್ಕಳಿಗೆ ಆಟದ ಮೂಲಕವೇ ಪಾಠವನ್ನು ಕಲಿಸಬೇಕು. ಈ ಪದ್ಧತಿಯುಲ್ಲಿ ಕಲಿತ ಮಕ್ಕಳ ಮನೋವೃತ್ತಿಗಳಿಗೆಲ್ಲಾ ನಿರಾತಂಕವಾಗಿ ಬೆಳೆದು ಮುಂದೆ ಅವರ ಬೆಳಕು ಚೆನ್ನಾಗಿ ಬೀಳುವದು. ತಂದೆಗೆ ಮಗನು ಹುಟ್ಟಿದನೆಂದು ಕೇಳಿದ್ದರಿಂದ ಆದ ಆನಂದವು ಆನಂದವೇ ಅಲ್ಲ; ಆ ಮಗನು ತನ್ನ ವಿದ್ಯಾಪ್ರಭಾವದಿಂದ ಒಳ್ಳೇ ಯಶಸ್ವಿಯಾದನೆಂದರೆ ಆಗುವ ಆನಂದವೇ ನಿಜವಾದ ಆನಂದ. ದಶರಥಮಹಾರಾಜನು ಮಕ್ಕಳ ಶಿಕ್ಷಣದಲ್ಲಿ ನಿಪುಣರಾದ ಉಪಾಧ್ಯಾಯರನ್ನಿಟ್ಟು ಅವರ ಮನೋವೃತ್ತಿಗಳೆಲ್ಲಾ ಚೆನ್ನಾಗಿ ಮೈದುಂಬಿಕೊಳ್ಳುವಂತೆ ಮಾಡಿದನು.

ದಶರಥನ ದೃಷ್ಟಿಯಿಂದ ತನ್ನ ಮಕ್ಕಳ ನಿಜವಾದ ವಿದ್ಯಾಭ್ಯಾಸವೆಂದರೆ ಗ್ರಂಥಕಾಲಕ್ಷೇಪವಲ್ಲ. ದಶರಥನು ವೀರಕ್ಷತ್ರಿಯು; ಅಖಂಡ ಭೂಮಂಡಲದಲ್ಲಿ ಪ್ರಖ್ಯಾತನಾದ ಮಹಾರಾಜ. ಮಹಾಮಹಾ ಶೂರಾಗ್ರೇಸರರು ಆಗಿಹೋದಂಥ ಸೂರ್ಯವಂಶದವನು. ಆದ್ದರಿಂದ ತಮ್ಮ ವರ್ಣಕ್ಕೆ ಶೋಭಿಸುವಂತೆ ಧನುರ್ವಿದ್ಯೆಯಲ್ಲಿ ಅವರನ್ನು ಧುರೀಣರನ್ನಾಗಿ ಮಾಡಬೇಕೆಂದು ಅವನ ಕುತೂಹಲ. ಅದು ಅವನಿಗೆ ಒಪ್ಪತಕ್ಕದ್ದೆ. ತನ್ನ ವರ್ಣಧರ್ಮವನ್ನು ತಾನು ಅನುಸರಿಸುವದು ಹೆಚ್ಚು ಶ್ರೇಯಸ್ಕರವಾದದ್ದು.

ಈ ವರ್ಣಾಶ್ರಮದ ವ್ಯವಸ್ಥೆಯೆಂಬುವದು ದೇಶಾಂತರಗಳಲ್ಲಿಲ್ಲ; ಇದು ನಮ್ಮ ದೇಶದ ಪ್ರಾಚೀನಪದ್ಧತಿ. ವರ್ಣಾಶ್ರಮದ ವ್ಯವಸ್ಥೆಯನ್ನು ನಮ್ಮ ಪೂರ್ವಿಕರು ಸರ್ವತೋಮುಖದಿಂದ ಕಾಪಾಡಿ ನಮ್ಮ ಪಾಲಿಗೆ ಬಿಟ್ಟು ಹೋಗಿರುವ ಅಖಂಡಭಂಡಾರವೆಂದರೂ ಅತ್ಯುಕ್ತಿಯಿಲ್ಲ. ಒಂದೊಂದು ವರ್ಣದವರು ಅವರವರ ಕುಲಕ್ರಮಾಗತವಾಗಿ ಬಂದಿರುವ ವಿದ್ಯೆಯನ್ನೇ ಬೆಳೆಸಿಕೊಳ್ಳುತ್ತ ಅದನ್ನೇ ತಮ್ಮ ಜೀವಿಕೆಯನ್ನಾಗಿ ಮಾಡಿಕೊಳ್ಳಬೇಕೆಂಬುದು ಅದರ ತತ್ತ್ವ. ಜೀವಿಕೆಗೆ ವರ್ಣಾಶ್ರಮ ವ್ಯವಸ್ಥೆಯನ್ನಿಡದೆ ಯಾರು ಯಾವದನ್ನು ಬೇಕಾದರೂ

ಅವಲಂಬಿಸಬಹುದೆಂದು ಅದರ ಸೂತ್ರವನ್ನು ಸಡಿಲವಾಗಿ ಬಿಟ್ಟರೆ ಒಂದೊಂದು ಕುಶಲವಿದ್ಯೆಯೂ ಒಬ್ಬೊಬ್ಬ ಮಹಾಬುದ್ಧಿಶಾಲಿಯಾದವನಿಗೆ ಧಾರೆಯೆರೆದಂತಾಗುವದು. ಇದರಿಂದ ಆ ವಿದ್ಯೆ ಅಸಾಧಾರಣವಾದ ಅಭ್ಯುದಯವನ್ನೂ ಪಡೆಯಬಹುದು; ಆದರೆ ಅದರ ಲಾಭವೆಲ್ಲಾ ಆ ಮಹಾಬುದ್ಧಿಶಾಲಿಯ ಬಳಿಯಲ್ಲಿ ಒಂದೇ ಕಡೆ ರಾಶಿಯಾಗಿ ಬಿದ್ದು ಹುಳಿತುಹೋಗುವದು ಮತ್ತು ಬುದ್ಧಿಶಕ್ತಿಯಲ್ಲಿ ಕಡಿಮೆಯಾದವರೆಲ್ಲರೂ ಹೊಟ್ಟೆಗಿಲ್ಲದೆ ಸಾಯಬೇಕಾಗುವದು. ವರ್ಣಾಶ್ರಮವ್ಯವಸ್ಥೆ ಇಲ್ಲದೆ ಇರುವಂಥ ದೇಶಗಳಲ್ಲೆಲ್ಲಾ ಹೀಗೆಯೇ ಇರುವದು. ಅಲ್ಲಿ ಶ್ರೀಮಂತರಿಗೆ ಅಜೀರ್ಣವಾಗುವಷ್ಟು ಧನರಾಶಿ; ಬಡವರಿಗೆ ಎದೆಯ ರಕ್ತವನ್ನೆಲ್ಲ ಬಸಿದರೂ ಒಂದಗಳು ಅನ್ನಕ್ಕೆ ಗತಿಯಿಲ್ಲ. ಒಂದೊಂದು ಕುಶಲವಿದ್ಯೆಯನ್ನು ಒಂದೊಂದು ವರ್ಣದವರೇ ಸಾಧಿಸತಕ್ಕದ್ದೆಂಬ ನಿಯಮವನ್ನು ಮಾಡಿದರೆ ಆ ವಿದ್ಯೆ ಈಗಲೇ ಅದರ ಪರಮಾವಧಿಯ ಉನ್ನತಾವಸ್ಥೆಯನ್ನು ಪಡೆಯದೆ ಹೋಗಬಹುದು; ಆದರೂ ಅದರ ಅಭ್ಯುದಯವು ಮೆಲ್ಲ ಮೆಲ್ಲಗೆ ನಡೆದೇ ನಡೆದೀತು; ಹೀಗಾಗುವದರಲ್ಲಿ ದೇಶದ ಸಂಪತ್ತು ಸ್ವಲ್ಪ ಹೆಚ್ಚು ಕಡಿಮೆ ಜನರ ಉದ್ಯೋಗಕ್ಕನುಗುಣವಾಗಿ ಎಲ್ಲರಲ್ಲಿಯೂ ಹರಡಿಕೊಳ್ಳುವದರಿಂದ ಐಶ್ವರ್ಯವಂತನಲ್ಲಿ ಮಿತಿಮೀರಿದ ಐಶ್ವರ್ಯವು ಗುಡ್ಡೆಯಾಗುವದಿಲ್ಲ; ಬಡವರಿಗೆ ಅನ್ನನೀರಿನ ತಾಪತ್ರಯವೂ ಇರುವದಿಲ್ಲ. ಆದ್ದರಿಂದ ವರ್ಣಾಶ್ರಮವ್ಯವಸ್ಥೆಯು ದೇಶದ ಹಿತಕ್ಕೆ ಸಾಧಕವಾಗಿರುವದು. ನಮ್ಮ ದೇಶದ ಜನರಲ್ಲಿ ಇನ್ನೂ ಕಾಣುವ ಅಷ್ಟಿಷ್ಟು ನೆಮ್ಮದಿಯು ನಮ್ಮ ಪೂರ್ವಿಕರ ಈ ವರ್ಣಾಶ್ರಮವ್ಯವಸ್ಥೆಯ ಫಲವೇ ಹೊರತು ಬೇರೆ ಅಲ್ಲ. ಕುಶಲವಿದ್ಯೆಗಳ ಉದ್ದೇಶವೇನು? ಸಾರ್ವಜನಿಕಸುಖವಲ್ಲವೆ? ಒಂದು ಕುಶಲ ವಿದ್ಯೆಯನ್ನು ಒಬ್ಬ ಬುದ್ಧಿಶಾಲಿಗೆ ಧಾರೆಯೆರೆದು ಬಿಟ್ಟು ಅದನ್ನು ಅದರ ಉಚ್ಚಸ್ಥಿತಿಗೇರಿಸಿಬಿಟ್ಟರೆ ಜನರಿಗೆ ಬಂದದ್ದೇನು? ವಿದ್ಯೆಯನ್ನು ಬೆಳೆಸುವದೇ ವಿದ್ಯೆಯ ಉದ್ದೇಶವಲ್ಲ; ಸಾರ್ವಜನಿಕಸುಖವನ್ನು ಬೆಳೆಸುವದು ಅದರ ಉದ್ದೇಶ. ಎಲ್ಲರೂ ಸುಖದಿಂದ ಬಾಳಬೇಕೆಂಬುದಾದರೆ ವರ್ಣಾ

ಶ್ರಮ ವ್ಯವಸ್ಥೆ ಬೇಕೇಬೇಕು. ಹೀಗೆ ವಂಶಪಾರಂಪರ್ಯವಾಗಿ ಒಂದು ವಿದ್ಯೆಯನ್ನು ಸಾಧಿಸುತ್ತ ಬಂದರೆ ಆ ವಿದ್ಯೆಯು ಕ್ರಮಕ್ರಮವಾಗಿ ವೀರ್ಯವತ್ತರವಾಗುತ್ತ ಬರುವದು. ದಶರಥಮಹಾರಾಜನು ತನ್ನ ಮಕ್ಕಳಿಗೆ ಕ್ಷತ್ರಿಯೋಚಿತವಾದ ಧನುರ್ವಿದ್ಯೆಯನ್ನು ಚೆನ್ನಾಗಿ ಕಲಿಸಿದನು. ಬೆರಳು ತೋರಿಸಿದರೆ ಹಸ್ತವನ್ನು ನುಂಗುವಂಥ ಆ ಹುಡುಗರು ಬಹು ಸ್ವಲ್ಪ ಕಾಲದಲ್ಲಿ ಮಹಾಮಹಾ ಅತಿರಥಮಹಾರಥರನ್ನೂ ಬೆರಗುಮಾಡುವಷ್ಟು ಚತುರರಾದರು. ಹೀಗಿರಲಾಗಿ ಹಿರಿಯನಾದ ಶ್ರೀರಾಮಚಂದ್ರನಿಗೆ ಸೀತಾದೇವಿಯೊಡನೆ ಲಗ್ನವಾಗುವಾಗ ಉತ್ತಮೋತ್ತಮವಾದ ದೇಹದಾರ್ಢ್ಯವನ್ನು ಹೊಂದಿ ಅನ್ಯಾದೃಶವಾದ ಕ್ಷಾತ್ರತೇಜಸ್ಸನ್ನೂ ಅಪ್ರತಿಮವಾದ ಸೌಜನ್ಯವನ್ನೂ ಪಡೆದು ಕೀರ್ತಿಚಂದ್ರಿಕೆಯಿಂದ ಸಮಸ್ತರ ಹೃದಯಕುಮುದಗಳನ್ನೂ ಆಹ್ಲಾದಗೊಳಿಸುತ್ತಿದ್ದ ಭರತನಿಗೆ ಜನಕರಾಯನ ಬಂಧುವಾದ ಕುಶಕೇತುವೆಂಬುವನು ತನ್ನ ಮಗಳಾದ ಮಾಂಡವಿಯನ್ನು ಕೊಟ್ಟು, ಅತ್ಯುತ್ಸಾಹದಿಂದ ವಿವಾಹವಿಧಿಯನ್ನು ನೆರವೇರಿಸಿದನು. ಆ ಮೇಲೆ ಮಕ್ಕಳೂ ಸೊಸೆಯರೂ ಮನೆಯಲ್ಲಿ ವಿಹರಿಸುತ್ತಿರುವದನ್ನು ನೋಡಿ ಸ್ವರ್ಗವನ್ನು ಪರಲೋಕವೆನ್ನುವದು ಕೇವಲ ಮೂಢರ ಮತವೆಂದು ಹೇಳುತ್ತ ದಶರಥನು ತನ್ನ ಅಭ್ಯುದಯಕ್ಕೆ ತಾನೇ ಹಿರಿಹಿರಿ ಹಿಗ್ಗುತ್ತಿದ್ದನು.

ಭರತನ ಮದುವೆಯಾದ ಮೇಲೆ ಅವನನ್ನು ಕರೆದುಕೊಂಡು ಹೋಗಿ ಕೆಲವು ದಿವಸ ಅವನೊಡನೆ ಆನಂದಾನುಭವವನ್ನು ಮಾಡುವ ಇಚ್ಛೆಯುಂಟಾಗಿರುವದೆಂದು ಕೈಕೆಯಿಯ ಸೋದರನಾದ ಯುಧಾಜಿದ್ರಾಜನು ಅಯೋಧ್ಯೆಗೆ ಹೇಳಿಕಳುಹಿಸಿದನು. ಸ್ತ್ರೀಯರಿಗೆ ತೌರುಮನೆಯೆಂದರೆ ಪಂಚಪ್ರಾಣ. ಸೋದರನ ಕಡೆಯಿಂದ ಸುದ್ದಿಬರುತ್ತಲೇ ಕೈಕೆಯಿಯು ಭರತನನ್ನು ಅಲ್ಲಿಗೆ ಕಳುಹಿಸಬೇಕೆಂದು ಗಂಡನೊಡನೆ ಮಾತು ತೆಗೆದಳು. ಮಕ್ಕಳನ್ನು ಬಿಟ್ಟಿರಲಾರದಂಥ ದಶರಥನು ಆ ಮಾತಿಗೆ ಒಡನೆ ಸದುತ್ತರವನ್ನು ಕೊಡಲಾರದೆ ಹೋದನು. ತನ್ನ ಮಗನು ತನ್ನ ತೌರುಮನೆಗೆ ಹೋಗಿ ಅಲ್ಲಿಯ ಉಪಚಾರಗಳನ್ನು

ಅನುಭವಿಸಿ ಬರಲೆಂದು ಕೈಕೇಯಿಯು ಆಸೆ. ಅವಳು ಆಗಿಂದಾಗ ಈ ಮಾತನ್ನು ಎತ್ತಿ ತನ್ನ ಅಭಿಪ್ರಾಯಕ್ಕೆ ರಾಜನನ್ನು ಒಲಿಸಿ ಕೊಳ್ಳಬೇಕೆಂದು ಪೀಡಿಸುತ್ತಿದ್ದದ್ದರಿಂದ ದಶರಥನು ಹಾಗೂ ಹೀಗೂ ತಲೇಹಾಕಬೇಕಾಯಿತು. ಪತಿಯ ಆಜ್ಞೆಯನ್ನು ಪಡೆದು ಕೈಕೇಯಿಯು ಭರತನನ್ನು ಅಲ್ಲಿಗೆ ಹೋಗಹೇಳಿದಳು. ಭರತನು ಒಂದು ಘಳಿಗೆಯಾದರೂ ರಾಮನನ್ನು ಬಿಟ್ಟಿದ್ದವನಲ್ಲ. ಈಗ ರಾಮನನ್ನು ಬಿಟ್ಟು ಅಲ್ಲಿಗೆ ಹೋಗಬೇಕೆಂದರೆ ಅವನಿಗೆ ಸೊಗಸದೇ ಹೋಯಿತು. ಅವನ ಸರ್ವಸುಖವೂ ರಾಮನನ್ನು ಅವಲಂಬಿಸಿಕೊಂಡಿತ್ತು. ಏನು ಮಾಡುವದು! ಬಿಸಿಯ ತುತ್ತು; ನುಂಗಿದರೆ ಗಂಟಲು ಸುಡುತ್ತದೆ. ಉಗುಳಿದರೆ ಮಹಾಪ್ರಸಾದವನ್ನು ಉಪೇಕ್ಷೆಮಾಡಿದಂತೆ ಆಗುತ್ತದೆ. ತಾಯಿತಂದೆಗಳ ಮಾತಿನಂತೆ ಹೋಗೋಣವೆಂದರೆ ರಾಮನನ್ನು ಬಿಟ್ಟಿರಲಾರದೆ ಮನಸ್ಸು ತಳಮಳಿಸುತ್ತದೆ. ರಾಮನ ಜೊತೆಯಲ್ಲಿಯೇ ಇರುವದಕ್ಕಾಗಿ ಇರೋಣವೆಂದರೆ ತಂದೆತಾಯಿಗಳ ಮಾತನ್ನು ಮೀರಿದಂತಾಗುತ್ತದೆ. ಗಂಟಲು ಸುಟ್ಟರೂ ಚಿಂತೆ ಇಲ್ಲ. ಮಹಾಪ್ರಸಾದವನ್ನು ನುಂಗಿಯೇ ಬಿಡಬೇಕೆಂದು ಭರತನು ಸೋದರಮಾವನ ಮನೆಗೆ ಪ್ರಯಾಣವನ್ನು ಸಿದ್ಧಮಾಡಿದನು. ರಾಜವೈಭವಕ್ಕೆ ತಕ್ಕ ಸಲಕರಣೆಗಳೆಲ್ಲಾ ಒಂದು ನಿಂತವು. ಬೇಕಾದಷ್ಟು ಸಾಕಪರ್ಣಿಗಳೊಡನೆ ವಿಜೃಂಭಣೆಯಿಂದ ಅವನು ಹೊರಟನು. ಹೊರಗೆ ಎಷ್ಟು ಉತ್ಸಾಹಸಾಧನಗಳಿದ್ದರೂ ಭರತನ ಮನಸ್ಸಿನಲ್ಲಿ ಮಾತ್ರ ಉತ್ಸಾಹವು ತಲೆದೋರಲಿಲ್ಲ. ಅವನು ಮನಸ್ಸಿಗೆ ಎಷ್ಟು ಧೈರ್ಯವನ್ನು ತಂದುಕೊಂಡರೂ ಅವನ ಎದೆ ಡವಡವ ಹೊಡೆದುಕೊಳ್ಳುತ್ತಲೇ ಇತ್ತು. ಅನ್ನುವದಕ್ಕಿಲ್ಲ,ಅನುಭವಿಸುವದಕ್ಕಿಲ್ಲ; ಭರತನು ಇಂಥ ಸಂಕಟಕ್ಕೆ ಸಿಕ್ಕಿದನು. ಹೊರಡುವಾಗ ಹೇಳತಕ್ಕವರಿಗೆಲ್ಲಾ ಹೇಳಿದ್ದಾಯಿತು. ಹೆಜ್ಜೆಯನ್ನು ಮುಂದಿಡಬೇಕೆಂದು ಎಷ್ಟು ಯತ್ನಿಸಿದರೂ ಅದು ಹಿಂದಕ್ಕೇ ಜಗ್ಗುತ್ತಿತ್ತು. ಆ ಸಮಯದಲ್ಲಿ ಅವನು ಏನೂ ತೋಚದವನಾಗಿ ಯಾವದೊಂದು ಕಾರಣವೂ ಇಲ್ಲದೆ ಸುಮ್ಮನೆ ಒಳಕ್ಕೆ ಹೋಗುವದು, ಹೊರಕ್ಕೆ ಬರುವದು ಹೀಗೆ ಮಾಡುತ್ತಿದ್ದು ಕೊನೆಗೆ ಶತ್ರುಘ್ನ

ನೊಡನೆ ರಥದ ಮೇಲೆ ಕುಳಿತುಕೊಂಡನು. ಸಾಗ ಕಳುಹಿಸುವ ದಕ್ಕೆ ಬಂದವರು ಎಷ್ಟು ಉಲ್ಲಾಸವನ್ನು ತೋರಿಸಿದರೂ ಭರತನು ಒಂದು ವೇಳೆಯಾದರೂ ಹಸನ್ಮುಖನಾಗಲಿಲ್ಲ. ರಥದ ಮೇಲೆ ಕುಳಿತವನು ಅದನ್ನು ವೇಗವಾಗಿ ನಡೆಸ ಹೇಳದೆ ಏನೋ ಒಂದು ಮಹದಾಲೋಚನೆಯಲ್ಲಿ ಮಗ್ನನಾಗಿರುವವನಂತೆ ಇದ್ದನು. ಅವನು ಕಣ್ಣಬಿಟ್ಟು ನೋಡುತ್ತಿದ್ದರೂ ಅವನಿಗೆ ದಾರಿಯಲ್ಲಿ ಯಾವದೊಂದು ವಿಶೇಷವೂ ಕಾಣುತ್ತಿರಲಿಲ್ಲ; ಕಿವಿಗಳನ್ನು ತೆಗೆದುಕೊಂಡಿದ್ದರೂ ಮನೋಹರವಾದ ಪಕ್ಷಿಗಳ ಗಾನ ಮೊದಲಾದವುಗಳು ಅವನಿಗೆ ಕೇಳಿಸುತ್ತಿರಲಿಲ್ಲ. ಮಾರ್ಗದಲ್ಲಿ ಸಂಧಿಸುವ ಗ್ರಾಮಸ್ಥರ ಉಪಚಾರೋಕ್ತಿಗಳಿಗೆ ಪದ್ಧತಿಯಂತೆ ಏನಾದರೂ ಉತ್ತರಗಳನ್ನು ಕೊಟ್ಟರೂ ಅದರ ವಿಚಾರವೇ ಅವನ ಮನಸ್ಸಿಗೆ ಹತ್ತಿರುತ್ತಿರಲಿಲ್ಲ. ಅಂತು ಅವನು ಹೀಗೆಯೇ ಮಾರ್ಗವನ್ನೆಲ್ಲಾ ದಾಟಿ ತನ್ನ ಸೋದರಮಾವನ ಅರಮನೆಯನ್ನು ಸೇರಿ ಕಾಲವನ್ನು ಕಳೆಯುತ್ತಿದ್ದನು.

## ಭರತನು ಅಯೋಧ್ಯೆಗೆ ತಿರುಗಿ ಬಂದದ್ದು

ಅಲ್ಲಿ ಯುಧಾಜಿದ್ರಾಜನು ಭರತನಿಗೆ ಉಲ್ಲಾಸಕರವಾದ ಸರ್ವಸೌಕರ್ಯಗಳನ್ನೂ ಕಲ್ಪಿಸಿದ್ದರೂ ಅವನ ಮನಸ್ಸಿನ ದುಗುಡ ಬೇರೆ ತಪ್ಪಲಿಲ್ಲ. ಅವನಿಗೆ ಎಚ್ಚರವಾಗಿರುವಾಗಲೆಲ್ಲಾ ರಾಮನ ಹಂಬಲು ಮತ್ತು ನಿಷ್ಕಾರಣವಾಗಿ ಮನಸ್ಸಿನ ತಳಮಳ; ಮಲಗುತ್ತಲೆ ಏನೇನೋ ಕೆಟ್ಟಕೆಟ್ಟ ಸ್ವಪ್ನಗಳು; ಗಾಢನಿದ್ರೆಯೆಂಬುವದು ಹತ್ತಲೇ ಒಲ್ಲದು; ಎದ್ದರೆ ಏನೋ ಒಂದು ಮಂಕು ಕವಿದುಕೊಂಡಹಾಗಿರುವದು. ಹೀಗಾಗಿ ಅವನ ಆರೋಗ್ಯವು ದಿನದಿನಕ್ಕೆ ಕೆಡುತ್ತ ಬಂತು. ಇದರಿಂದ ಭರತನ ಮನಸ್ಸಿಗೊಂದು ಗಾಬರಿಯುಂಟಾಯಿತು. ಅಧರ್ಮದಲ್ಲಿ ಮನಸ್ಸು ಹಾಕುವವರಿಗೂ ಆಹಾರವಿಹಾರಗಳಲ್ಲಿ ಅನಿಯತ ವೃತ್ತಿಯುಳ್ಳವರಿಗೂ ದುಃಸ್ವಪ್ನಗಳಾಗುವದು ಯೋಗ್ಯವಾದದ್ದು. ಧರ್ಮದಲ್ಲಿಯೇ ಮನಸ್ಸನ್ನಿಟ್ಟು ಆಹಾರವಿಹಾರ ಮೊದಲಾದವುಗಳಲ್ಲೆಲ್ಲಾ ಸಾತ್ತ್ವಿಕರಾಗಿರುವವರಿಗೆ ಆಗುವ ಸ್ವಪ್ನಗಳೆಲ್ಲಾ ಒಳ್ಳೆಯ

ವುಗಳೇ ಆಗಿರುವವು. ಸ್ವಪ್ನಗಳು ಸಾಮಾನ್ಯವಾಗಿ ನಮ್ಮ ಎಚ್ಚರದಲ್ಲಿನ ನಡವಳಿಕೆಗಳ ಸಂಸ್ಕಾರಗಳೆಂದು ಕೆಲವರು ಅಭಿಪ್ರಾಯಪಡುವರು. ಇದನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳುವದಕ್ಕಾಗುವದಿಲ್ಲ. ಏಕೆಂದರೆ ಒಬ್ಬನು ಮಲಗಿರುವಾಗ ತಾನು ಸಮುದ್ರದಲ್ಲಿ ಈಸುತ್ತಿರುವಂತೆಯೋ ಆಕಾಶದಲ್ಲಿ ಹಾರಾಡುತ್ತಿರುವಂತೆಯೋ ಕನಸು ಕಾಣುತ್ತಾನೆ. ಅವನಿಗೆ ಎಚ್ಚರದಲ್ಲಿ ಈಸುಬರದೇ ಇರುವದೂ ಉಂಟು. ಇದಲ್ಲದೆ ಆಕಾಶದಲ್ಲಿ ಹಾರಾಡುವದೆಂಬುದಂತು ಅಸಂಭವವಾದ ಮಾತು. ಆದ್ದರಿಂದ ಕನಸುಗಳೆಲ್ಲಾ ಎಚ್ಚರದ ನಡವಳಿಕೆಗಳ ಸಂಸ್ಕಾರವೇ ಸರಿಯೆಂದು ಸಾಧಿಸುವದಕ್ಕಾಗುವದಿಲ್ಲ. ಕನಸಿನಲ್ಲಿ ಅವ್ಯವಸ್ಥೆಯಿಂದ ಏನೇನೋ ಕಾಣುತ್ತದೆ. ಕನಸಿನಲ್ಲಿ ಕಾಣುವದೆಲ್ಲಾ ಸುಳ್ಳೆಂದು ಎಲ್ಲರೂ ತಿಳಿದಿದ್ದಾರೆ. ಕಾಶಿಯಲ್ಲಿ ಮಲಗಿದಂಥ ಒಬ್ಬನು ಕಾಶಿಯ ನೆನಪೇ ಇಲ್ಲದೆ ಉತ್ತರಕ್ಷಣದಲ್ಲಿಯೇ ತನ್ನ ಸ್ನೇಹಿತನೊಡನೆ ರಾಮೇಶ್ವರದ ಸೇತುವನ್ನು ಕಾಣುತ್ತಾನೆ. ಘೋರ್ಗರೆಯುವ ಆ ಸಮುದ್ರದ ಪರ್ವತದಂಥ ಅಲೆಗಳು ತನ್ನ ಮೇಲೆ ಹಾಯುವದಕ್ಕೆ ಬರುವದನ್ನು ನೋಡಿ ಹೆದರಿಕೆಯಾಗಿ ಅವನಿಗೆ ಒಡನೇ ಎಚ್ಚರವಾಗಿ ಬಿಡುತ್ತದೆ. ಆಗ ಅವನು ಕಾಶಿಯಲ್ಲಿ ಏಳುವನೇ ಹೊರತು ರಾಮೇಶ್ವರದಲ್ಲಿ ಅಲ್ಲ. ಆದ್ದರಿಂದ ತಾನು ಕಾಶಿಯನ್ನು ಬಿಟ್ಟು ಹೋಗಿಯೇ ಇಲ್ಲವೆಂದು ಅವನಿಗೆ ತಿಳಿಯುತ್ತದೆ. ಒಂದು ಪಕ್ಷ ಅವನು ತನ್ನ ಸ್ನೇಹಿತನನ್ನು ಕೇಳಿದರೂ ರಾಮೇಶ್ವರಕ್ಕೆ ಹೋದದ್ದು ಸುಳ್ಳೆಂಬುದು ದೃಢವಾಗುತ್ತದೆ. ಆದ್ದರಿಂದ ಕನಸಿನಲ್ಲಿ ಕಾಣುವದೆಲ್ಲಾ ಸುಳ್ಳು. ಆದರೂ ನಮ್ಮ ಶಾಸ್ತ್ರಕಾರರು ಕನಸಿಗೂ ಫಲವನ್ನು ಹೇಳಿದ್ದಾರೆ. ಅಧರ್ಮದಲ್ಲಿ ನಿರತರಾದವರ ಕನಸಿಗಿಂತಲೂ ಧರ್ಮನಿಷ್ಠರಾದವರ ಕನಸುಗಳು ಹೆಚ್ಚು ಫಲಕಾರಿಗಳು. ಈ ಸಂದರ್ಭದಲ್ಲಿ ಮನಸ್ಸಿನಲ್ಲೊಂದು ಸಂಶಯವು ಬರಬಹುದು. ಅದೇನೆಂದರೆ ಕನಸೆಂಬುದೇ ಸುಳ್ಳಾದ ಮೇಲೆ ಆ ಸುಳ್ಳಿಗೆ ಫಲವುಂಟೆಂಬುದು ಆಕಾಶದಲ್ಲಿರುವ ಹೂ ಘಮಘಮಿಸುತ್ತೆಂಬ ಮಾತಿನಂತೆ ನಗೆಗೇಡಾಗಿರುವದು. ಒಂದು ಪಕ್ಷ ಕನಸಿನ ನೋಟಕ್ಕೆ

ಕನಸಿನಲ್ಲಿ ಫಲವುಂಟೆಂದರೂ ಒಪ್ಪುವದು. ಹೇಗೆಂದರೆ: ಕನಸಿನಲ್ಲಿ ಒಬ್ಬನು ಹುಲಿಯನ್ನು ಕಾಣುತ್ತಾನೆ. ಆಗ ಅದರ ಫಲವಾಗಿ ಅವನು ಕನಸಿನಲ್ಲಿಯೇ ಗಡಗಡ ನಡುಗಿ ಓಡಿಹೋಗುತ್ತಾನೆಂದರೆ ಸರಿಯಾಗುವದು. ಏಕೆಂದರೆ ಹುಲಿಯನ್ನು ಕಂಡದ್ದೂ ಸುಳ್ಳು. ಓಡಿ ಹೋದದ್ದೂ ಸುಳ್ಳು; ಸುಳ್ಳು ಹುಲಿಯ ಫಲ ಸುಳ್ಳು ಓಟ. ಆದರೆ ಕನಸಿನ ಫಲವು ಎಚ್ಚರದಲ್ಲಿ ನಮಗೆ ಅನುಭವಕ್ಕೆ ಒರುವದೂ ಸುಳ್ಳಲ್ಲ. ಕನಸಿನಲ್ಲಿ ಕಂಡ ಹುಲಿಯಿಂದಾದ ಭಯವು ಎಚ್ಚರದಲ್ಲಿ ನಡುಕ ಮುಂತಾದ ರೂಪವಾಗಿ ಕಾಣುವದನ್ನು ನಾವೆಲ್ಲರೂ ಅನುಭವಿಸುತ್ತಿದ್ದೇವೆ. ಆ ಭಯವು ಕನಸಿನ ಹುಲಿಯ ಫಲವಾದರೂ ಅದು ಎಚ್ಚರವನ್ನೂ ವ್ಯಾಪಿಸುತ್ತೆಂದ ಮೇಲೆ ಕನಸಿನ ಫಲವನ್ನು ಸುಳ್ಳೆಂದು ಹೇಳುವದು ಹೇಗೆ? ಆಹಾರವಿಹಾರಗಳ ಹೆಚ್ಚು ಕಡಿಮೆ ಮುಂತಾದ ದೋಷಗಳಿಂದಾಗುವ ಸ್ವಪ್ನಗಳಿಗೆ ಹೆಚ್ಚಿನದೊಂದು ಫಲವಾಗದೆ ಹೋದರೂ ಯಮನಿಯಮಾದಿಗಳುಳ್ಳ ಸಾತ್ತ್ವಿಕರಿಗೆ ಆಗುವ ಕನಸು ಎಚ್ಚರದಲ್ಲಿ ಫಲವನ್ನು ಕೊಟ್ಟೇಕೊಡುವದು. ಭರತನು ಸಾತ್ತ್ವಿಕನಾದ್ದರಿಂದ ಅವನ ಕನಸು ಫಲಕಾರಿಯಾಗಲೇ ಬೇಕು. ಆ ಕನಸು ಕೆಟ್ಟದ್ದಾಗಿದ್ದದ್ದರಿಂದ ಅದೇನೋ ಅರಿಷ್ಟ ವನ್ನು ಸೂಚನೆಮಾಡುವದೆಂದು ಭರತನ ಮನಸ್ಸಿಗೆ ತಲ್ಲಣ ಉಂಟಾ ಯಿತು. ರಾಮಲಕ್ಷ್ಮಣರು ಹೇಗಿದ್ದಾರೋ! ಮಾತಾಪಿತೃಗಳ ಸ್ಥಿತಿಯೇನಾಗಿದೆಯೋ!! ಪ್ರಜೆಗಳ ಯೋಗಕ್ಷೇಮಕ್ಕೇನು ಕೊರತೆ ಬಂದಿದೆಯೋ!!! ಎಂದು ಮುಂತಾಗಿ ಅವನ ಮನಸ್ಸಿನಲ್ಲಿ ಬಗೆಬಗೆಯಾಗಿ ಅಲೆಗಳ ಮೇಲೆ ಅಲೆಗಳು ಏಳುವದಕ್ಕೆ ಮೊದಲಾದವು. ಆಗ ಸರ್ವ ಸಮರ್ಥನಾದ ಭಗವಂತನು ಸರ್ವರ ಸಮಸ್ತವಾದ ಅಮಂಗಳ ಗಳನ್ನೂ ಪರಿಹಾರಮಾಡಲೆಂದು ತನ್ನ ದುಃಸ್ವಪ್ನಗಳ ಶಾಂತ್ಯರ್ಥ ವಾಗಿ ಭರತನು ಕಂಡಕಂಡ ದೇವರುಗಳಿಗೆಲ್ಲಾ ಕಾಣಿಕೆಯನ್ನು ಕಟ್ಟಿ ನವಗ್ರಹಯಜ್ಞ ಮತ್ತು ಭೂರಿಭೋಜನ ಮೊದಲಾದವುಗಳನ್ನು ಮಾಡಿಸಿದನಲ್ಲದೆ ಅಯೋಧ್ಯೆಗೇ ಹೊರಟೇಬಿಡಬೇಕೆಂದು ಮನಸ್ಸು ಮಾಡಿದನು.

ಹೀಗೆ ಅವನು ಕಳವಳಿಸುತ್ತಿರುವಾಗ ಅಯೋಧ್ಯೆಯಿಂದ ಒಬ್ಬ ದೂತನು ಬಂದಿದ್ದಾನೆಂಬ ಸುದ್ದಿ ಬಂತು. ಭರತನು ಒಡನೆ ಅವನನ್ನು ಒಳಕ್ಕೆ ಬರಮಾಡಿಕೊಂಡನು. ದೂತನು ತಾನು ಓಡುತ್ತೋಡುತ್ತ ಬಂದಿರುವುದನ್ನು ಸೂಚಿಸುವಂತೆ ಬುಸುಗುಟ್ಟುತ್ತಿದ್ದನು. ಅವನ ಮೈಯೆಲ್ಲಾ ಕಟ್ಟುಬೆವರಿಟ್ಟು ನೀರುಕೋಡಿಯಾಗಿ ಹರಿಯುತ್ತಿತ್ತು. ಒಳಗೆ ಬಂದ ಕೂಡಲೆ ಅವನು ಶರಣುಮಾಡಿ "ಮಹಾಸ್ವಾಮಿ, ಗುರು ಮಹಾರಾಜರ ಅಪ್ಪಣೆಯಾಗಿದೆ; ತಾವು ಈ ಕ್ಷಣದಲ್ಲಿಯೇ ಪ್ರಯಾಣ ವನ್ನು ಬೆಳೆಸಬೇಕು. ಊರಿನ ಯೋಗಕ್ಷೇಮದ ಮಾತು ತೆಗೆದರೆ ಸುಮ್ಮನೆ ತಡವಾದೀತು" ಎಂದು ಒಂದೇ ಉಸಿರಿನಿಂದ ಹೇಳಿದನು. ಭರತನಿಗೆ ಇನ್ನೂ ಎದೆಯೊಡೆಯಿತು. ಗುರುಗಳ ಆಜ್ಞೆಯೆಂದಮೇಲೆ ಅದರ ಮುಂದೆ ಮಾತಿಲ್ಲವೆಂದು ಭರತನು ತನ್ನ ತಮ್ಮನೊಡನೆ ಅಯೋ ಧ್ಯೆಗೆ ಆಕ್ಷಣವೇ ಹೊರಟೇ ಹೊರಟನು. ಯುಧಾಜಿದ್ರಾಜನು ತನ್ನ ಸೋದರಳಿಯನಿಗೆ ಸರ್ವಮರ್ಯಾದೆಗಳನ್ನೂ ಸಾಂಗವಾಗಿ ನಡೆಸಿ ದನು. ಆದರೂ ಭರತನ ಮನಸ್ಸನ್ನು ಉಲ್ಲಾಸಗೊಳಿಸುವ ಶಕ್ತಿಯು ಯಾವುದರಲ್ಲಿಯೂ ತೋರಲಿಲ್ಲ. ಹೋಗಿ ಬರುತ್ತೇನೆಂದು ಎಲ್ಲರಿಗೂ ಹೇಳಿ ಭರತನು ಉತ್ತಮಾಶ್ವಗಳನ್ನು ಕಟ್ಟಿಸಿಕೊಂಡು ರಥವನ್ನೇರಿ ತೀವ್ರವೇಗದಿಂದ ಮಾರ್ಗವನ್ನು ದಾಟುತ್ತ ಬರುತ್ತಿರುವಾಗ ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಎಷ್ಟೋ ಕುಲಪರ್ವತಗಳೂ ಎಷ್ಟೋ ಮಹಾನದಿಗಳೂ ಹಿಂದು ಬಿದ್ದು ಹೋಗುತ್ತಿದ್ದವು. ಹೀಗೆ ಬರುತ್ತ ಬರುತ್ತ ಅಯೋಧ್ಯೆಯ ಎಲ್ಲೆಯೊಳಕ್ಕೆ ಬಂದನು.

ಯಾರಿಗಾದರೂ ತನ್ನ ದೇಶವೂ ತನ್ನ ಜನರೂ ಹೆಚ್ಚು ಆನಂದ ವನ್ನುಂಟುಮಾಡುವಂಥವರಾಗುತ್ತಾರೆ. ಅದೇನು ಕಾರಣವೋ ಈ ನಿಯಮವು ಈಗ ಮಾತ್ರ ಭರತನಿಗೆ ಅನ್ವಯಿಸಲಿಲ್ಲ. ಅಯೋಧ್ಯೆ ಯನ್ನು ಬಿಟ್ಟು ಹೋಗಿ ಸ್ವಲ್ಪದಿವಸವೇ ಆಗಿದ್ದರೂ ಈಗ ಆ ರಾಜ್ಯವು ಯಾರದೋ ಒಂದು ದೀನರಾಜ್ಯವಾಗಿ ತೋರಿತು. ಅವನ ಭಾಗಕ್ಕೆ ಹಸುರು ಹುಲ್ಲುಗಳೂ ಚಿಗುರುಗಳೂ ಕಳೆಗುಂದಿ ಬಾಡಿದ್ದುವು; ಕೆರೆ ಕಟ್ಟೆಗಳ ನೀರುಗಳೆಲ್ಲಾ ಒಂದಾಗಿ ಕ್ರಿಮಿಗಳಿಂದ ಕೂಡಿದ್ದುವು;

ಕೋಗಿಲೆಗಳೂ ನವಿಲುಗಳೂ ವಿಹಾರ ಮಾಡುತ್ತಿದ್ದ ತೋಟಗಳಲ್ಲಿ ಕಾಗೆಗಳೂ ಹದ್ದುಗಳೂ ತುಂಬಿದ್ದವು. ಮರದ ಮೇಲಿನ ಹಣ್ಣು ಹಂಪಲುಗಳು ರಸವೆಲ್ಲಾ ಇಂಗಿ ಸುಕ್ಕಿಕೊಂಡು ಹೋಗಿದ್ದವು; ದೂರದಲ್ಲಿ ಅಲ್ಲಲ್ಲಿ ಹೊಗೆಸುತ್ತಿಕೊಂಡಿರುವಂತೆ ಆಕಾಶವೆಲ್ಲಾ ಮಲಿನ ವಾಗಿತ್ತು. ಎಲ್ಲಿಯೂ ಜನಸಂಚಾರವೇ ಇಲ್ಲದ್ದರಿಂದ ತಾನು ಕಗ್ಗಾಡಿನ ನಡುವೆ ಇದ್ದಂತೆ ಭರತನಿಗೆ ಅನುಭವವಾಗುತ್ತಿತ್ತು. ಊರಿನ ಹತ್ತಿರಕ್ಕೆ ಬಂದ ಹಾಗೆಲ್ಲಾ ತಿರುಗಾಡುವ ಜನರು ಕಣ್ಣಿಗೆ ಬಿದ್ದರೂ ಅವರಲ್ಲಿ ಕೆಲವರು ಬೇಕಾಗಿ ಅಡ್ಡದಾರಿಯನ್ನು ಹಿಡಿದು ತಲೆತಪ್ಪಿಸಿಕೊಳ್ಳುತ್ತಿದ್ದರು; ಕಾಣಿಸಿಕೊಂಡವರೂ ದುಮ್ಮಾನದಿಂದ ತಲೆಯನ್ನು ಬಗ್ಗಿಸಿಕೊಂಡು ಕೈಮುಗಿದ ಶಾಸ್ತ್ರವನ್ನು ತೀರಿಸಿ ಮುಂದಿನ ದಾರಿಯನ್ನು ಹಿಡಿಯುತ್ತಿದ್ದರೇ ಹೊರತು ಮಾತಾಡಿಸು ತ್ತಿರಲಿಲ್ಲ. ಊರಲ್ಲಿ ಎಲ್ಲಿ ನೋಡಿದರೂ ಹಾಳುಬಿದ್ದಂತೆ ತೋರು ತ್ತಿತ್ತು. ಮಕ್ಕಳುಮರಿಗಳ ಮುಖದ ಮೇಲೆ ಕೂಡ ಮಂಕು ಕವಿದುಕೊಂಡಿತ್ತು. ಇನ್ನು ದೊಡ್ಡವರ ಪಾಡೇನು? ಉತ್ಸಾಹ ದಿಂದ ಪೂರ್ಣರಾದ ಪ್ರಜೆಗಳಿಂದ ಕಿಕ್ಕಿರಿದಿರುತ್ತಿದ್ದ ಆ ಮಹಾರಾಜ ವೀಧಿಯಲ್ಲೆಲ್ಲಾ ಭರತನು ತಾನೇ ತಾನು. ಭರತನು ಬಂದನೆಂಬ ಸುದ್ದಿಯನ್ನು ಕೇಳುತ್ತಲೇ ಜನರೆಲ್ಲರೂ ಅಲ್ಲಲ್ಲಿಯೇ ಅಡಗಿಕೊಳ್ಳುವ ವದರಲ್ಲಿರುವಾಗ ಇನ್ನು ಅವನನ್ನು ಇದಿರುಗೊಳ್ಳುವವರಾರು? ಇದ ನ್ನೆಲ್ಲಾ ನೋಡಿ ದಿಕ್ಕು ತೋಚದವನಾಗಿ ಮುಂದೆ ಬಂದು ಭರತನು ಅರಮನೆಯ ಮುಂದೆ ರಥವನ್ನಿಳಿಸಿದನು.

## ಭರತನಿಗೂ ಅವನ ತಾಯಿಯರಿಗೂ ನಡೆದ ಮಾತುಗಳು

ಭರತನು ಅರಮನೆಯೊಳಕ್ಕೆ ಕಾಲಿಟ್ಟು ಸುತ್ತಲೂ ನೋಡಿ ದಾಗ ತಾನೊಂದು ಗುಹೆಯೊಳಕ್ಕೆ ಹೋಗುತ್ತಿದ್ದೇನೆಂಬ ಹಾಗಾ ಯಿತು. ಏಕೆಂದರೆ ಎಲ್ಲಿನೋಡಿದರೂ ಜನವೇ ಇಲ್ಲ. ಆದ್ದರಿಂದ ದಿಕ್ಕುತೋಚದವನಾಗಿ ಭರತನು ಇದರ ಕಾರಣವನ್ನು ತಿಳಿಯ ಬೇಕೆಂದು ತನ್ನ ತಾಯ ಮನೆಯ ಕಡೆಗೆ ತಿರುಗಿದನು. ಇಷ್ಟರಲ್ಲಿ

ಮಗನು ಬಂದ ಸುದ್ದಿಯನ್ನು ಕೇಳಿ ಕೈಕೆಯಿಯು ಸಂಭ್ರಮದಿಂದ ಬಂದು ಮಗನನ್ನು ಇದಿರುಗೊಂಡಳು. ಚಂದ್ರನು ಸಮುದ್ರದಲ್ಲಿ ಹುಟ್ಟಿದವನೆಂದು ಪುರಾಣದ ಕಥೆಯಿದೆ. ಅದರ ನಿಜತ್ವವು ಹೇಗಾದರೂ ಇರಲಿ. ಚಂದ್ರಬಿಂಬವೂ ಜಡವೆಂದೂ ಸಮುದ್ರವೂ ಜಡವೆಂದೂ ಎಲ್ಲರೂ ತಿಳಿಯುವರಷ್ಟೆ. ಆದ್ದರಿಂದ ಚಂದ್ರಬಿಂಬವನ್ನು ತನ್ನ ಹೊಟ್ಟೆಯಲ್ಲಿ ಹುಟ್ಟಿದ್ದೆಂದು ಸಮುದ್ರವೂ ಸಮುದ್ರವು ತನ್ನನ್ನು ಹೊತ್ತು ಹೆತ್ತದ್ದೆಂದು ಚಂದ್ರಬಿಂಬವೂ ಯೋಚಿಸುವವೆಂದು ಹೇಳುವದಕ್ಕಂತು ಸಾಮಾನ್ಯವಾಗಿ ನಮ್ಮ ಮನಸ್ಸು ಒಪ್ಪುವದಿಲ್ಲ. ಹೀಗಿದ್ದರೂ ಚಂದ್ರನು ಹುಟ್ಟಿದನೆಂದರೆ ಸಮುದ್ರವು ಉಕ್ಕುವದು. ಜಡವಾದ ಚಂದ್ರಬಿಂಬವನ್ನು ಕಂಡರೆ ಜಡವಾದ ಸಮುದ್ರವೇ ಉಕ್ಕಿ ಹರಿಯುವದೆಂದಮೇಲೆ ಚೇತನವುಳ್ಳ ಮನುಷ್ಯರಲ್ಲಿ ಮಗನನ್ನು ನೋಡುವ ಉದ್ದೇಶದಿಂದ ತಾಯಿಯರೆದುರುಬರುವದೆಂಬುದೇನಾಶ್ಚರ್ಯ? ಈ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನು ತಿಳಿಯತಕ್ಕದ್ದಿದೆ. ಚಂದ್ರ ಮತ್ತು ಸಮುದ್ರ— ಮೊದಲಾದವುಗಳನ್ನು ನಾವು ಸುಖದುಃಖಜ್ಞಾನವಿಲ್ಲದ ಜಡವಸ್ತುಗಳೆಂದು ಸಾಮಾನ್ಯವಾಗಿ ತಿಳಿದಿರುವೆವಷ್ಟೆ. ಇದು ನಮ್ಮ ಮೂಢತನವೇ ಸರಿ. ಈಚೆಗೆ ಶ್ರೀಯುತ ಜಗದೀಶ ಚಂದ್ರಬೋಸ್ ಎಂಬ ಭೌತಿಕ ಶಾಸ್ತ್ರಜ್ಞರು ಎಲ್ಲಾ ವಸ್ತುಗಳಲ್ಲಿಯೂ ಚೇತನವಿರುವದೆಂದು ಪ್ರತ್ಯಕ್ಷ ಪ್ರಮಾಣದಿಂದ ತೋರಿಸಿಕೊಟ್ಟಿರುತ್ತಾರೆ. ಚೇತನವು ಎಲ್ಲೆಲ್ಲಿಯೂ ಇರುವದೆಂಬರ್ಥವನ್ನು ಶ್ರೀಯುತ ಬೋಸರು ಭೌತಿಕಶಾಸ್ತ್ರದೃಷ್ಟಿಯಿಂದ ಒಪ್ಪಿಸಿ ತೋರಿಸಿದ್ದು ಹೊಸದೇ ಹೊರತು ನಮ್ಮ ಭಾರತೀಯರಿಗೆ ಈ ಅಭಿಪ್ರಾಯವೇನೂ ಹೊಸದಲ್ಲ. ಆದ್ದರಿಂದ ಇದು ವಿದೇಶೀಯರಿಗೆ ಆಶ್ಚರ್ಯವೆನಿಸಿದಂತೆ ನಮಗಾಗುವದಿಲ್ಲ. ಯಾವದರ ಉತ್ಪತ್ತಿಕಾಲವನ್ನು ಕಂಡುಹಿಡಿಯುವದಕ್ಕಾಗಿ ಸುಪ್ರಸಿದ್ಧರಾದ ವಿದೇಶೀಯ ಸೂಕ್ಷ್ಮದರ್ಶಿಗಳು ತಾವು ಕಂಡಾಟವನ್ನೆಲ್ಲಾ ಆಡಿ ಕೈ ಸೋತು ತಲೆಯನ್ನು ಬಗ್ಗಿಸಿರುವರೋ ಅಂಥ ವೇದಗಳಲ್ಲಿ ಚೇತನವು ''ಸರ್ವವ್ಯಾಪಿ'' ಎಂಬರ್ಥವು ಪ್ರತಿಯೊಂದು ಮಂತ್ರದಲ್ಲಿಯೂ ಮತ್ತು

ಅದರ ಪ್ರತಿಯೊಂದು ಪಾದದಲ್ಲಿಯೂ ತೂರಿ ಹಾಯುತ್ತಿರುವದು. ಬಿಡಿಯಾಗಿ ತಮ್ಮಲ್ಲಿ ಪ್ರತ್ಯೇಕವಾಗಿರುವ ಮನಸ್ಸನ್ನು ಪ್ರಪಂಚದ ಮನೋರಾಶಿಯಲ್ಲಿ ಒಂದುಮಾಡಿ ಮಹಾಸಮಾಧಿಯನ್ನು ಸಾಧಿಸಿ ಚೇತನವು ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವದನ್ನು ಕರತಲಾಮಲಕ ವಾಗಿ ಕಂಡು ಅದೇ ತಾವಾಗಿ ಹೋಗಿದ್ದಂಥ ಮಹಾಮಹಿಮರ ವಂಶದಲ್ಲಿ ಹುಟ್ಟಿರುವ ನಾವು ನಮ್ಮ ಪೂರ್ವಿಕರ ಮಹೋಪದೇಶ ವನ್ನು ಕಡೆಗಾಣುತ್ತ ಅದರದೊಂದು ಝಳಕನ್ನು ಕಂಡ ಭೌತಿಕ ಶಾಸ್ತ್ರಜ್ಞರ ಕುಣಿತಕ್ಕೆ ತಾಳಾ ಹಾಕುವದಕ್ಕೆ ಹೋಗುತ್ತೇವಲ್ಲ! ನಮ್ಮ ಶೋಚನೀಯಸ್ಥಿತಿಗೆ ಎಷ್ಟು ಅತ್ತರೂ ತೀರದು. ಶ್ರೀಯುತ ಬೋಸರು ಅದನ್ನು ಕಂಡುಹಿಡಿದದ್ದು ಮಹತ್ತ್ವದ ಮಾತಲ್ಲವೆಂದು ನಮ್ಮ ಅಭಿಪ್ರಾಯವಲ್ಲ. ನಾವೆಲ್ಲರೂ ಅಜ್ಞಾನವೆಂಬ ಗಾಢನಿದ್ರೆ ಯಲ್ಲಿ ಗೊರಕೆಯನ್ನು ಹೊಡೆಯುತ್ತ ಮೂಲೆಯಕಡೆಗೆ ಮುಖ ವನ್ನು ಮಾಡಿಕೊಂಡಿರುವಾಗ ಶ್ರೀಯುತ ಬೋಸರು ಆ ವಿಷಯದಲ್ಲಿ ಮುಂದುವರಿದು ವಿಚಾರಮಾಡಿ ಸಿದ್ಧಾಂತವನ್ನು ತಿಳಿದದ್ದು ಶ್ಲಾಘ್ಯ ವಾದದ್ದೇ ಸರಿ. ಅದರಲ್ಲಿಯೂ ಅದನ್ನು ಭೌತಿಕಶಾಸ್ತ್ರದೃಷ್ಟಿಯಿಂದ ಒಪ್ಪಿಸಿ ತೋರಿಸಿದ್ದಂತು ಅತ್ಯಂತ ಶ್ರೇಯಸ್ಕರವಾಗಿದೆ. ನಮ್ಮ ವೇದರಾಶಿಯಲ್ಲಿ ಈ ಸಿದ್ಧಾಂತದಂಥ ಕೋಟ್ಯನುಕೋಟಿ ರತ್ನಗಳು ತಳವನ್ನು ಹಿಡಿದಿರುವವು. ನಮ್ಮ ಮನಸ್ಸು ಅವುಗಳ ವಿಚಾರಕ್ಕೆ ಹೋಗದೆ ಇರುವದರಿಂದ ಅವುಗಳ ಮೇಲೆ ಧೂಳು ಕೂತಂತೆ ಆಗಿ ಅವು ನಮಗೆ ಎದ್ದು ಕಾಣುವದಿಲ್ಲ. ವಿಚಾರಮಾಡಿದೊಡನೆ ಆ ಧೂಳು ಹಾರಿ ಹೋಗಿ ನವರತ್ನಗಳೇ ನಮಗೆ ನೂರೆಯಾಗುವವು; ಇರಲಿ, ಅಡ್ಡದಾರಿಯಲ್ಲಿ ಬಹಳದೂರ ಹೋಗಬಾರದು. ಇತ್ತ ಭರತನು ಬಂದನೆಂಬ ಸುದ್ದಿಯನ್ನು ಕೇಳುತ್ತಲೇ ಬಹುದಿನಗಳಿಂದ ಅಗಲಿದ್ದ ಮಗನನ್ನು ನೋಡಬೇಕೆಂಬುದೊಂದು; ತನ್ನ ತವರು ಮನೆಯ ಸುದ್ದಿಯನ್ನು ಕೇಳಬೇಕೆಂಬುದೊಂದು; ಈ ಎರಡು ಕುತೂ ಹಲಗಳಿಂದ ಕೈಕೆಯಿಯು ತಾನೇ ಮುಂದೆ ಬಂದು "ಬಂದೆಯಾ, ಕಂದ, ನನ್ನ ತವರು ಮನೆಯವರೆಲ್ಲರೂ ಕ್ಷೇಮದಿಂದಿರುವರೆ?" ಎಂದು ಪ್ರಶ್ನೆಮಾಡಿದಳು.

ತವರುಮನೆಯ ಯೋಗಕ್ಷೇಮವನ್ನು ತಿಳಿಯಬೇಕೆಂದು ಕೈಕೆಯಿಗೆ ಇದ್ದ ಆತುರದ ಸಹಸ್ರಪಾಲು ರಾಮಲಕ್ಷ್ಮಣರೇ ಮೊದಲಾದವರ ಯೋಗಕ್ಷೇಮವನ್ನು ತಿಳಿಯಬೇಕೆಂದು ಭರತನಿಗೆ ಇತ್ತು. ಭರತನ ಸರ್ವೇಂದ್ರಿಯಗಳೂ ರಾಮಲಕ್ಷ್ಮಣರ ಕಲ್ಪನೆಯಲ್ಲಿಯೇ ಮುಳುಗಿ ಯಾವ ಇತರಕಲ್ಪನೆಯನ್ನೂ ಗ್ರಹಿಸದೆ ಇದ್ದದ್ದರಿಂದ ಕೈಕೆಯಿಯ ಮಾತುಗಳು ಗಾಳಿಯಲ್ಲಿ ಹಾರಿಹೋದವು. ಭರತನು ಸುತ್ತಲೂ ನೋಡುತ್ತ ಬೆಚ್ಚಿಬಿದ್ದವನಾಗಿ "ಅಮ್ಮ ರಾಮನೆಲ್ಲಿ, ಲಕ್ಷ್ಮಣನೆಲ್ಲಿ, ಸೀತೆಯೆಲ್ಲಿ, ಅಪ್ಪನೆಲ್ಲಿ?" ಎಂದು ಕನವರಿಸಿದನು. ಆಗ ಕೈಕೆಯಿಯು ತನ್ನ ಮಾತು ಸರ್ವವಿಧದಲ್ಲಿಯೂ ಭರತನಿಗೆ ಸಂತೋಷಕರವಾಗುವದೆಂದು "ಮಗು, ಭರತ, ನನ್ನ ಮಾತಿನಂತೆ ಆರ್ಯಪುತ್ರನು ನಿನಗೆ ಪಟ್ಟಾಭಿಷೇಕವನ್ನು ಮಾಡಿಸುವದಕ್ಕಾಗಿ ರಾಮನನ್ನು ವನವಾಸಕ್ಕೆ ಕಳುಹಿಸಿರುವನು. ಲಕ್ಷ್ಮಣನೂ ಸೀತೆಯೂ ರಾಮನ ಹಿಂದೆ ಹೋಗಿರುವರು" ಎಂದು ಇನ್ನೂ ಹೇಳುತ್ತಿರುವಷ್ಟರಲ್ಲಿಯೇ ಈ ಮಾತು ಕಿವಿಗೆ ಬೀಳುತ್ತಲೆ ಸಿಡಿಲು ಬಡಿದಂತಾಗಿ ಭರತನು ಧೊಪ್ಪನೆ ಬಿದ್ದು ಮೂರ್ಛೆಯನ್ನು ಹೊಂದಿದನು. ಇದನ್ನು ನೋಡಿ ಕೈಕೆಯಿಯೂ ಗಾಬರಿಗೊಂಡು ಮಗನಿಗೆ ಶೈತ್ಯೋಪಚಾರಗಳನ್ನು ಮಾಡಿದಳು. ಆಗ ಭರತನು ಚೇತನಗೊಂಡು "ಅಣ್ಣಾ, ರಾಮಚಂದ್ರ, ನನಗೆ ಪಟ್ಟವಾಗಲೆಂದು ನೀನು ವನವಾಸಕ್ಕೆ ತೆರಳಿದೆಯ? ನಾನು ಪಟ್ಟವನ್ನು ಕಟ್ಟಿಕೊಂಡು ಏನನ್ನು ಆಳಲಿ? ಆತ್ಮನು ಹೋದಮೇಲೆ ಶರೀರವು ಅಮಂಗಳವಾಗಿರುವಂತೆ ನೀನು ಬಿಟ್ಟು ಹೋದಮೇಲೆ ಈ ರಾಜ್ಯವು ನನಗೆ ಅಮಂಗಳವಾಗಿರುವದಲ್ಲ? ಈ ಅಮಂಗಳ ವ್ಯವಹಾರಕ್ಕೆ ನನ್ನನ್ನು ಬಿಟ್ಟು ಹೋಗುವದಕ್ಕೆ ನಿನಗೆ ನಾನೆಂಥ ಅಪರಾಧವನ್ನು ಮಾಡಿದೆನು? ಹಾಯ್! ಹಾಯ್!! ಲಕ್ಷ್ಮಣ, ನೀನು ಧನ್ಯ! ಸೀತಾದೇವಿ, ನೀನು ಧನ್ಯೆ! ನಾನಲ್ಲವೆ ಪರಮಪಾತಕಿ! ನಿಜ, ನಿಜ, ನನ್ನಲ್ಲಿ ಅಪರಾಧವಿರಲೇ ಬೇಕು. ಸರ್ವೇಶ್ವರನಾದ ನೀನು ತಪ್ಪಿಲ್ಲದೆ ಶಿಕ್ಷಿಸುವೆಯ? ಅಥವಾ ನೀನು ಪರಮಪ್ರೇಮಸ್ವರೂಪನಾದ್ದರಿಂದ ಶಿಕ್ಷಿಸುವವನೇ ಅಲ್ಲ. ಈಗ ನನಗಾಗಿರುವ

ಶಿಕ್ಷೆಯು ನನ್ನ ಪಾಪದ ಫಲ. ನಿನ್ನ ಸೇವೆಯನ್ನು ಮಾಡುತ್ತ ನಿನ್ನನ್ನೇ ಅನುವರ್ತಿಸಿಕೊಂಡಿರದೆ ನಿನ್ನ ಕಡೆ ಇದ್ದ ಲಕ್ಷ್ಯವನ್ನು ಸೋದರಮಾವನ ಮನೆಯ ಕಡೆಗೆ ತಿರುಗಿಸಿದ್ದರ ಫಲವಲ್ಲವೆ ಇದು? ನಾನು ಮಾಡಿದ್ದನ್ನು ನಾನೇ ಉಣ್ಣಬೇಕು. ಪರಮಾತ್ಮನ ಕಡೆ ಇದ್ದ ಲಕ್ಷ್ಯವನ್ನು ವಿಷಯಗಳ ಕಡೆಗೆ ತಿರಿಗಿಸುವವರಿಗೆ ದುಃಖವಲ್ಲದೆ ಮತ್ತೇನು ಸಿಕ್ಕೀತು? ಇಲ್ಲಿಂದ ನಾನು ಹೊರಡುವಾಗಲೇ ನನ್ನ ಮನಸ್ಸಿಗೆ ಆ ಪ್ರಯಾಣವು ಪ್ರಶಸ್ತವೆನಿಸಲಿಲ್ಲ. ಪರಮಕಾರುಣಿಕನಾದ ಭಗವಂತನು ಆಗ ಹೊರಡಬಾರದೆಂಬ ಸ್ಫೂರ್ತಿಯನ್ನುಂಟುಮಾಡಿದರೂ ಈ ಹಾಳು ತಾಯ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ನಾನು ಆ ಸ್ಫೂರ್ತಿಯನ್ನುಪೇಕ್ಷೆಮಾಡಿದೆನು. ತನ್ನ ಮನಸ್ಸು ಪರಮಾತ್ಮನ ಕಡೆಗೆ ಒಲಿಯುತ್ತಿರುವಾಗ ಅದನ್ನು ಅಡ್ಡದಾರಿಗೆಳೆಯುವಂಥವರು ತಾಯಿಯಾಗಲಿ ತಂದೆಯಾಗಲಿ ಗುರುವಾಗಲಿ ಅವರು ತಿರಸ್ಕಾರಕ್ಕೆ ಯೋಗ್ಯರೆಂದು ಶಾಸ್ತ್ರದಲ್ಲಿ ಹೇಳಿರುವ ಮಾತು ಸುಳ್ಳಲ್ಲ. ಆಗ ನಾನು ತಂದೆತಾಯಿಗಳ ಮಾತನ್ನು ಮೀರಿದ್ದರೆ ನನಗೆ ಈ ದುಃಖವು ಬರುತ್ತಿರಲಿಲ್ಲ. ಶ್ರೀರಾಮಚಂದ್ರನು ವ್ಯವಹಾರದೃಷ್ಟಿಯಿಂದ ಬರೀ ನನ್ನ ಅಣ್ಣನಾದರೂ ಅವನು ನನ್ನ ಪರಮಾತ್ಮನೆಂದೇ ನನ್ನ ನಂಬಿಕೆ. ಪರಮಾತ್ಮನೆಂಬುವನು ಎಲ್ಲಿಯೋ ಒಂದು ಕಡೆ ಯಾವದೋ ಒಂದು ರೂಪಿನಿಂದ ಇರುವನೆಂಬುದು ಮಕ್ಕಳಾಟಿಕೆಯ ಮಾತು. ಅವನು ಎಲ್ಲೆಲ್ಲಿಯೂ ಇರುವನು; ಎಲ್ಲರ ಹೃದಯದಲ್ಲಿಯೂ ಇರುವನು. ಅವನೇ ಮೊಟ್ಟಮೊದಲು ಮನದಲ್ಲಿ ಯೋಗ್ಯಾಯೋಗ್ಯವಿವೇಚನೆಯು ಸ್ಫುರಿಸುವಂತೆ ಮಾಡುವನು. ಹೀಗೆಂದು ಅದಕ್ಕೆ ಮಹತ್ತ್ವವನ್ನು ಕೊಡುವವರು ಸುಖವನ್ನು ಪಡೆಯುವರು; ಅದನ್ನು ಉಪೇಕ್ಷಿಸುವವರು ದುಃಖಕ್ಕೆ ಭಾಗಿಗಳಾಗುವರು. ನಾನು ಅದನ್ನು ಉಪೇಕ್ಷೆ ಮಾಡಿಯೇ ಈಗ ದುಃಖಕ್ಕೆ ಭಾಗಿಯಾಗಿರುವೆನು. ಸರಿ, ಸರಿ. ನನಗಾದ ದುಃಸ್ವಪ್ನಗಳಿಗೂ ಈಗ ಅರ್ಥವಾಯಿತು. ಅವುಗಳ ಶಾಂತ್ಯರ್ಥವಾಗಿ ನಾನು ಬಗೆಬಗೆಯ ಭಗವತ್ಸೇವೆಗಳನ್ನು ಮಾಡಿದ್ದರಿಂದ ಸರಿಪಡಿಸಿಕೊಳ್ಳಲಾರದಂಥ ಅನರ್ಥನೇನೂ ಆಗಿಲ್ಲ. ಒಳ್ಳೇದು.

"ಅಮ್ಮ, ರಾಮನನ್ನು ವನವಾಸಕ್ಕೆ ಕಳುಹಿಸಿ ನನಗೆ ಪಟ್ಟವನ್ನು ಕಟ್ಟಬೇಕೆಂಬ ದುರ್ಬುದ್ಧಿ ತಾತನಿಗೇಕೆ ಬಂತು? ಎಲ್ಲಿ, ಮೊದಲು ತಾತನನ್ನು ತೋರಿಸು" ಎಂದು ಕ್ರುದ್ಧನಾಗಿ ಹೇಳಲು "ಭರತ, ಇಲ್ಲದ್ದನ್ನು ಹಂಬಲಿಸಿಕೊಳ್ಳಬೇಡ. ರಾಮನು ಹೋಗುತ್ತಲೇ ಆರ್ಯಪುತ್ರನು ಸ್ವರ್ಗಸ್ಥನಾದನು" ಎಂದು ಹೇಳುತ್ತಲೇ ಭರತನು "ಹಾ, ತಾತ, ರಾಮನು ಹೋಗುತ್ತಲೇ ನೀನು ದೇಹತ್ಯಾಗವನ್ನು ಮಾಡಿರುವದನ್ನು ನೋಡಿದರೆ ನಿನ್ನದೇ ನಿಜವಾದ ಪ್ರೇಮ. ರಾಮನು ವನವಾಸಕ್ಕೆ ಹೋದನೆಂದು ಕೇಳಿಯೂ ಇನ್ನೂ ಜೀವವನ್ನು ಹಿಡಿದುಕೊಂಡೇ ಇರುವ ನಾನು ನಿಜವಾಗಿ ನಿನ್ನ ಹೊಟ್ಟೆಯಲ್ಲಿ ಹುಟ್ಟುವದಕ್ಕೆ ಯೋಗ್ಯನಲ್ಲ. ಅಯ್ಯೋ ತಾತ, ರಾಮನ ಮೇಲೆ ನಿನಗೆ ಇಷ್ಟು ಪ್ರೇಮವಿರುವಾಗ ನೀನು ರಾಮನಿಗೆ ಪಟ್ಟವನ್ನು ಕಟ್ಟದೆ ಈ ಭೇದಬುದ್ಧಿಗೇಕೆ ಅವಕಾಶವನ್ನು ಕೊಟ್ಟೆ?" ಎಂದು ಗಟ್ಟಿಯಾಗಿ ಅತ್ತು "ಅಮ್ಮ, ನಮ್ಮ ವಂಶಕ್ಕೆ ಕಳಂಕವುಂಟಾಗುವಂತೆ ತಂದೆಯು ಹೀಗೇಕೆ ಮಾಡಿದನು?" ಎಂದು ತಾಯಿಗೆ ಪ್ರಶ್ನೆ ಮಾಡಿದನು. ಆಗ ಆಕೆಯು "ಭರತ, ನೀನು ಇಲ್ಲದ ದುಃಖವನ್ನು ಮೈಮೇಲೆ ಹಾಕಿಕೊಂಡು ಮುಂದುಗಾಣದೆ ಏನೇನೋ ಹಲಬುತ್ತಿ; ಸಮಾಧಾನಬುದ್ಧಿಯಿಂದ ವಿಚಾರಮಾಡು. ಆರ್ಯಪುತ್ರನು ಕುಲಕ್ಕೆ ಕಳಂಕವನ್ನುಂಟುಮಾಡುವಂಥ ಕಾರ್ಯವನ್ನೆಷ್ಟುಮಾತ್ರವೂ ಮಾಡಿಲ್ಲ; ಅಷ್ಟೇ ಅಲ್ಲ; ಕುಲಕ್ಕೆ ಭೂಷಣವಾಗುವಂತೆಯೇ ಮಾಡಿರುವನು. ಮಂಥರೆಯ ಸೂಚನೆಯಂತೆ ನಾನು ನಿನ್ನ ಹಿತಕ್ಕಾಗಿ ವರವನ್ನು ಕೇಳಲು ನನಗೆ ಕೊಟ್ಟ ಮಾತನ್ನು ನಡೆಸಿ ಸತ್ಯಸಂಧನೆಂದು ಹೊಗಳಿಸಿಕೊಳ್ಳುವದಕ್ಕಾಗಿ ಆರ್ಯಪುತ್ರನು ಪರಮಪ್ರಿಯನಾದ ರಾಮನನ್ನು ಕೂಡ ಕಾಡಿಗೆ ಕಳುಹಿಸಿದನು" ಎಂದು ಉಸಿರೆತ್ತಲು ಉರಿಯುವ ಗಾಯದ ಮೇಲೆ ಉಪ್ಪುನೀರೆರದಂತಾಗಿ ಭರತನು ಅಷ್ಟಕ್ಕೇ ಆ ಮಾತಿಗೆ ಅಡ್ಡ ಬಂದು "ಛಿ, ದುಷ್ಟೆ, ನಿನಗೆ ಇಂಥ ದುಷ್ಟಕಲ್ಪನೆ ಏಕೆ ಬಂತು? ರಾಮನೇ ಅರಸಾಗಿದ್ದರೆ ನಿನಗೇನು ಕಡಿಮೆಯಾಗುತ್ತಿತ್ತು? ಯಾವದೋ ಒಂದು ಬಗೆಯ ಕನಸಿನ ವೈಭವ

ವನ್ನು ಬಯಸಿ ಅದನ್ನು ಪಡೆಯುವದಕ್ಕಾಗಿ ನನ್ನನ್ನೂ ದುಃಖವೆಂಬ ದಾವಾಗ್ನಿಯೊಳಕ್ಕೆ ನೂಕಿ ನೀನೂ ಆರ್ಯಪುತ್ರನನ್ನು ಕಳೆದುಕೊಂಡು ಅಮಂಗಳಸ್ವರೂಪಳಾಗಿರುವೆಯಲ್ಲ! ತನಗೂ ಕೇಡನ್ನುಂಟುಮಾಡಿ ಕೊಂಡು ಇತರರಿಗೂ ಕೇಡನ್ನುಂಟುಮಾಡಿದಂಥ ನಿನ್ನನ್ನು ತಾಯಿ ಯೆನ್ನಲೋ ಮಾರಿಯೆನ್ನಲೋ? ನೀನು ಯಾರು? ನಿಜವಾಗಿ ಹೇಳು. ನೀನು ನಮ್ಮ ಸರ್ವಮಹಾಪಾತಕಗಳ ಮೂರ್ತಿಸ್ವರೂಪ ಳಾದ ರಾಕ್ಷಸಿಯೇ ಹೊರತು ಮನುಷ್ಯಳು ಬೇರೆ ಅಲ್ಲ. ಅಯ್ಯೋ, ವಧ್ಯವಾದ ಹೆಬ್ಬುಲಿಯನ್ನು ಪೂಜಾರ್ಹವಾದ ಗೋವೆಂದು ಭಾವಿಸಿ ನಮ್ಮ ತಂದೆಯು ಮೋಸ ಹೋದನಲ್ಲ! ಸ್ತ್ರೀಯರೆಂದರೆ ಎಲ್ಲಾ ಕಪಟಗಳಿಗೂ ದುರ್ಗುಣಗಳಿಗೂ ಪಾಪಗಳಿಗೂ ಗಣಿಯೆಂದೂ ಅವರ ಉದ್ದೇಶವನ್ನು ಕಾಣುವದು ಸಾಕ್ಷಾತ್ ಬ್ರಹ್ಮದೇವನಿಗೂ ಅಳವಲ್ಲ ವೆಂದೂ ನೀತಿಶಾಸ್ತ್ರಜ್ಞರು ಹೇಳುವ ಮಾತಿಗೆ ನೀನೊಂದು ದೃಷ್ಟಾಂ ತವಾಗಿರುವದು ಹೊರತು ನಿನ್ನಲ್ಲೇನು ಗುಣವಿದೆ? ಪಾಪ, ನಮ್ಮ ತಂದೆಯು ಕೇವಲ ಸರಳ ಸ್ವಭಾವದವನು. ಅವನಿಗೆ ನಿನ್ನ ಕುಟಿಲ ತನವೇನು ಗೊತ್ತು? ಅಯ್ಯೋ ದೈವವೇ, ನಾನಿನ್ನೆಂಥ ಪಾಪವನ್ನು ಮಾಡಿರಬಹುದು! ದಶರಥನನ್ನು ತಂದೆಯಾಗಿಯೂ ಶ್ರೀರಾಮಚಂದ್ರ ನನ್ನು ಅಣ್ಣನಾಗಿಯೂ ಉಳ್ಳ ನಾನು ನಿನ್ನ ಹೊಟ್ಟೆಯಲ್ಲಿ ಹುಟ್ಟ ಬೇಕೇ? ಹೇ ಪಾಪಿಣಿ, ನಿನ್ನಲ್ಲಿ ಬೇಕಾದಷ್ಟು ಪಾಪಬುದ್ಧಿ ಇರು ವದಲ್ಲ! ನಾನು ಹುಟ್ಟಿದಾಗಲೇ ನನ್ನನ್ನು ಕತ್ತುಹಿಸುಕಿ ಕೊಲ್ಲಬಾರ ದಾಗಿತ್ತೆ? ಈ ರೀತಿಯಾದ ಅಹಿತವನ್ನು ಮಾಡಿ ನನ್ನ ಮಾಂಸಖಂಡ ಗಳನ್ನೆಲ್ಲಾ ಕರಕರ ಕೊಯ್ಯುವಷ್ಟು ನನ್ನ ಮೇಲೆ ಹಗೆತನವೇಕೆ? ಅತ್ಯುತ್ಕಟವಾದ ಪಾಪವನ್ನು ಮಾಡಿದ ಹೊರತು ನಿನಗೆ ತೃಪ್ತಿಯಾ ಗುವದಿಲ್ಲವಲ್ಲವೆ? ಇಂಥ ವರವನ್ನು ಕೇಳುವಾಗ ನಿನ್ನ ನಾಲಿಗೆಯು ಸೀಳಿಹೋಗಲಿಲ್ಲವಲ್ಲ! ನೀನು ಎಂಥ ವಜ್ರದೇಹಿಯು! ರಾಮನನ್ನು ದೂರಕ್ಕೆ ಕಳುಹಿಸಿದಂಥ ನೀನು ಇನ್ನೂ ನನ್ನ ಕಣ್ಣಿಗೆ ಸುಣ್ಣವಾಗಿ ನಿಂತಿರುವೆಯಲ್ಲ! ಮಿಂಡತನವನ್ನು ತೋರಿಸಿ ಗಂಡನನ್ನು ನೀಗಿ ಕೊಂಡು ಭಂಡಬಾಳು ಬಾಳುವಂಥ ನಿನ್ನನ್ನು ತುಂಡ್ತುಂಡು

ಮಾಡಿಬಿಡಬೇಕೆನಿಸುತ್ತಿರುವದಲ್ಲ!'' ಎಂದು ಕಣ್ಣುಗಳಿಂದ ಕಿಡಿಗಳನ್ನುದುರಿಸುತ್ತ ಹಲ್ಲುಹಲ್ಲು ಕಡಿಯುತ್ತ ಹುಬ್ಬುಗಳನ್ನು ಕುಣಿಸುತ್ತ ತಾಯಮಾತಿಗೆ ಅವಕಾಶವನ್ನು ಕೊಡದೆ ತಾಯಿಯ ಮೇಲೆ ವಾಗ್ದಂಡಪ್ರಹಾರಗಳನ್ನು ಪ್ರಯೋಗಮಾಡಿದನು.

ಈ ಹೊತ್ತಿಗೆ ಸರಿಯಾಗಿ ಮಂಥರೆಯು ತಾನು ರಾಜಪ್ರಾಪ್ತಿಯನ್ನು ಮಾಡಿಕೊಟ್ಟವಳೆಂಬ ಹೆಮ್ಮೆಯಿಂದ ಭರತನಿಗೆ ಕಾಣಿಸಿಕೊಳ್ಳಬೇಕೆಂದು ಸರ್ವಾಲಂಕಾರ ಭೂಷಿತಳಾಗಿ ವಲಪು ಮಾಡುತ್ತ ಅಲ್ಲಿಗೆ ಬಂದಳು. ಅವಳನ್ನು ಕಾಣುತ್ತಲೇ ಭರತನಿಗೆ ಉರಿಯುವ ಅಗ್ನಿಯ ಮೇಲೆ ತುಪ್ಪವನ್ನೆರದಂತೆ ಸಿಟ್ಟುಹೆಚ್ಚಾಗಲು ಅವನು ಆಕೆಯ ಬೆನ್ನಿನ ಮೇಲೆ ಎಡಗಾಲಿನಿಂದ ಒಳ್ಳೆಯದಾದ ಒಂದು ಒದೆಯನ್ನು ಕೊಟ್ಟನು. ಅದರಿಂದ ಅವಳು ನೆಲದ ಮೇಲೆ ಬಿದ್ದು ಉರುಳುತ್ತ ಗಟ್ಟಿಯಾಗಿ ಗೋಳಾಡುವದಕ್ಕೆ ಮೊದಲು ಮಾಡಿದಳು. ಅವಳು ಬಿದ್ದ ಹೊಡೆತಕ್ಕೆ ಮುಖವೆಲ್ಲಾ ಜಜ್ಜಿಹೋಗಿ ಗಾಯವಾಯಿತಲ್ಲದೆ ಹಲ್ಲುಗಳೆಲ್ಲಾ ಚೂರುಚೂರಾಗಿ ಚೆಲ್ಲಿ ಹೋಗಿ ಬಾಯಿಂದ ರಕ್ತದ ಕೋಡಿಹರಿಯುತ್ತಿರಲು ಆಕೆಯು ''ಅಯ್ಯೋ, ನನ್ನ ಮನೆಯ ಮೇಲೆ ಕಲಶವನ್ನಿಡುವದಕ್ಕೆ ನಾನು ಈ ಕೆಲಸ ಮಾಡಲಿಲ್ಲ; ನನ್ನ ಒಡತಿಯ ಮಗನು ಸಿಂಹಾಸನವನ್ನು ಹತ್ತಿದ್ದನ್ನು ನೋಡಬೇಕೆಂಬ ಆಸೆಯಿಂದ ಮಾಡಿದೆ; ನನ್ನ ಈ ಪ್ರಯತ್ನಕ್ಕೆ ಇದೇ ಫಲವೇ? ದೇವ, ನನ್ನದೇನು ತಪ್ಪಿರಬಹುದು! ನಾನು ಹಿತವೆಂದು ಮಾಡಿದ್ದು ಅಹಿತವಾಯಿತಲ್ಲ!'' ಎಂದು ಕಠೋರಧ್ವನಿಯಿಂದ ಅತ್ತಳು. ಆಗ ಇವಳು ಅಂಗುಷ್ಠದಿಂದ ನೆತ್ತಿಯವರೆಗೂ ಕಪಟಬುದ್ಧಿಯಿಂದ ಕೂಡಿರುವಳೆಂದು ಅವಳ ಜಡೆಯನ್ನು ಹಿಡಿದು ಶತ್ರುಘ್ನನು ದರದರ ಎಳೆಯುವದಕ್ಕೆ ಮೊದಲು ಮಾಡಿದನು. ಅದನ್ನು ನೋಡಿ ಭರತನು ''ತಮ್ಮ, ಸ್ತ್ರೀಯರ ಮೇಲೆ ಕೈ ಮಾಡಬಾರದು. ಸ್ವಲ್ಪವಟ್ಟಿಗೆ ಮನಸ್ಸಿನಲ್ಲಿ ಉದ್ವೇಗವನ್ನು ಕಡಿಮೆಮಾಡಿಕೊಂಡು ವಿಚಾರಮಾಡಿದರೆ ಈಗ ನಡೆದಿರುವ ಅನರ್ಥದೋಷವನ್ನು ಯಾರ ಮೇಲೆ ಹೊರಿಸುವದಕ್ಕೂ ಆಗುವದಿಲ್ಲ. ಮಂಥರೆಯು ದಾಸಿಮಾತ್ರದವಳು. ಮಹಾಕುಲೀ

ನೆಯೂ ರಾಜಪುತ್ರಿಯೂ ರಾಜಮಹಿಷಿಯೂ ಆದ ನಮ್ಮ ತಾಯಿಗೇ ಈ ಬುದ್ಧಿ ಬಂದಿರುವಾಗ ಇವಳ ಪಾಡೇನು? ಏನೋ ಹೊಟ್ಟೆಯಲ್ಲಿ ಸಂಕಟವಾದ್ದರಿಂದ ತಾಯ ವಿಷಯದಲ್ಲಿ ಕೂಡ ಬಾಯಿಯನ್ನು ಮುಂದುಮಾಡಿಬಿಟ್ಟೆನು; ಉಪಾಯವಿಲ್ಲ. ನಮ್ಮ ತಾಯಿ ನಮಗೆ ಅಹಿತವನ್ನು ಮಾಡುವದಕ್ಕೆ ಎಂದಿಗೂ ಮನಸ್ಸು ಮಾಡಳು. ಏನೋ ಒಂದು ನಮ್ಮ ಪ್ರಬಲವಾದ ದುರದೃಷ್ಟವೇ ಎಲ್ಲರಿಗೂ ಮಂಕು ಬೂದಿಯನ್ನು ತಳಿದು ಈ ಕೆಲಸವನ್ನು ಮಾಡಿಸಿರಬೇಕು. ಏನಾದರೂ ಆಗಿರಲಿ, ನನಗಂತು ಇಲ್ಲಿ ನಿಂತಿರುವದಕ್ಕೆ ಕೂಡ ಮನಸ್ಸು ಬರದು. ರಾಮನ ವನವಾಸದಿಂದ ಕೌಸಲ್ಯೆಯ ಅವಸ್ಥೆಯೇನಾಗಿದೆಯೋ ನೋಡೋಣ; ನಡೆ'' ಎಂದು ಹೇಳಿ ಇಬ್ಬರೂ ಕೌಸಲ್ಯೆಯ ಕಡೆಗೆ ಸರಸರ ಹೋಗಿಬಿಟ್ಟರು. ಮಂಥರೆಗಂತು ಜೀವದಾನವನ್ನು ಮಾಡಿದ್ದೇ ಮಹಾನುಗ್ರಹವಾಯಿತು. ಭರತನ ಮನೋವೃತ್ತಿಯನ್ನು ನೋಡಿದ ಮೇಲೆ ಕೈಕೆಯಿಗೆ ತನ್ನ ತಪ್ಪು ತನಗೆ ತಿಳಿದಂತಾಗಿ ಆಕೆಯು ವಿವೇಕಮಾರ್ಗದಲ್ಲಿ ತನ್ನ ವಿಚಾರವನ್ನು ಮುಂದುಮಾಡಿ ನೋಡಿ ಅದುವರೆಗೆ ಆಗಿ ಹೋದದ್ದಕ್ಕಾಗಿ ಪಶ್ಚಾತ್ತಾಪ ಪಡುತ್ತ ತಲೆಯನ್ನು ತಗ್ಗಿಸಿಕೊಂಡಳು.

ಸಿಂಹಾಸನವನ್ನು ಹತ್ತುವಂಥ ರಾಜಯೋಗವು ದೊರೆಯುವ ಹಾಗಿದ್ದರೆ ಅಣ್ಣತಮ್ಮಂದಿರನ್ನೂ ಹಿರಿಯರನ್ನೂ ಕೂಡ ಕೊಂದ ಉದಾಹರಣೆಗಳು ನಮ್ಮ ಕಲಿಯುಗದ ಇತಿಹಾಸದಲ್ಲಿ ಬೇಕಾದಷ್ಟು ಸಿಕ್ಕುವವು. ಕಲಿಯುಗದವರ ಮನಸ್ಸು ಇಷ್ಟು ಕಠೋರವಾಗಿ ಪಾಪಾವಿಷ್ಟವಾಗಿರುವದರಿಂದ ನಮಗೆ ತಮ್ಮನ ಸಿಂಹಾಸನಾರೋಹಣಕ್ಕೆ ಅಡ್ಡಬರಬಾರದೆಂಬ ರಾಮನ ಮತ್ತು ಅಣ್ಣನನ್ನು ತನ್ನ ಪಂಚಪ್ರಾಣವೆಂಬಂಥ ಭರತನ ಮನಸ್ಸಿನ ಸ್ಥಿತಿಯನ್ನು ಚೆನ್ನಾಗಿ ಗ್ರಹಿಸುವದಕ್ಕೆ ಬರುವ ಹಾಗಿಲ್ಲ. ಇದರ ಮೇಲೆ ರಾಮಲಕ್ಷ್ಮಣಭರತಶತ್ರುಘ್ನರು ಸರ್ವಸಾಮಾನ್ಯರಂತೆ ಜನ್ಮವೆತ್ತಿರುವರೂ ಅಲ್ಲ. ಅಗ್ನಿನಾರಾಯಣನ ಪ್ರಸಾದದ ಪ್ರಭಾವದಿಂದ ಹುಟ್ಟಿ ದೇವಾಂಶಸಂಭೂತರೆನಿಸಿಕೊಂಡಿರುವವರು; ಮನುಷ್ಯಮಾತ್ರದವರ ದೋಷಗಳನ್ನು

ಹೊಂದಿದವರಲ್ಲ. ಅಂಥವರ ಅಂತರಂಗವು ನಮಗೆ ಹೇಗೆ ತಿಳಿದೀತು? ಹಾಗಾದರೆ ಅದರ ಗೊಡವೆ ನಮಗೇನ್ನೇಕೆಂದು ನಾವು ನಿರಾಶರಾಗ ಬೇಕಾದ್ದಿಲ್ಲ. ನಾವು ನಮ್ಮ ಪ್ರಯತ್ನದಿಂದ ನಮ್ಮ ಮನಸ್ಸಿನ ದುಷ್ಟಚೇಷ್ಟೆಯನ್ನು ಸ್ವಲ್ಪಮಟ್ಟಿಗಾದರೂ ತಗ್ಗಿಸಿ ತಮೋಗುಣ ವನ್ನೂ ರಜೋಗುಣವನ್ನೂ ದೂರಮಾಡುತ್ತ ಸತ್ತ್ವಗುಣವನ್ನು ಎಷ್ಟರ ಮಟ್ಟಿಗೆ ಮೈಗೂಡಿಸಿಕೊಳ್ಳುವೆವೋ ಅಷ್ಟರ ಮಟ್ಟಿಗೆ ಆ ಮಹಾಮಹಿಮರ ದೈವಿಕತ್ವವು ಅಭಿವ್ಯಕ್ತವಾಗುವದು. ಆದ್ದರಿಂದ ಈ ಪುಣ್ಯಕಥೆಯ ಪವಿತ್ರತೆಯನ್ನು ಮನಗಾಣಬೇಕಾದರೆ ನಾವು ಅಗತ್ಯವಾಗಿ ಸರ್ವರೀತಿಯಿಂದಲೂ ಸರ್ವೋತ್ಕರ್ಷಸಂಪನ್ನರಾಗಬೇಕು. ಭರತನು ರಾಮನನ್ನು ಬರೀ ಅಣ್ಣನೆಂದೇ ಅಲ್ಲದೆ ತನ್ನ ಪರಮಾತ್ಮನೆಂದೇ ಭಾವಿಸಿದ್ದು ಎಲ್ಲಾಬಗೆಯಿಂದಲೂ ಸಮಂಜಸವಾಗಿ ತೋರುತ್ತದೆ. ರಾಮನು ಪರಮಾತ್ಮನಾದ್ದರಿಂದಲೇ ಅವನು ದೂರವಾದೊಡನೆ ಭರ ತನ ಮನಸ್ಸಿನಲ್ಲಿ ಅಮಂಗಲವಾದ ಕಲ್ಪನೆಗಳು ಮೈದೋರಿದವು; ದೇಶದ ಸೌಭಾಗ್ಯವೆಲ್ಲಾ ಮಾಲಿನ್ಯವನ್ನು ಪಡೆಯಿತು; ಜನರೆಲ್ಲರೂ ಮಂಕಾದರು. ಪರಮಾತ್ಮನೆಂದರೇನು? ಪರಮಪ್ರೇಮಸ್ವರೂಪ. ಪ್ರೇಮಮೂರ್ತಿಯಾದ ರಾಮನು ಬಿಟ್ಟು ಹೋದ ಮೇಲೆ ಹೀಗಾಗು ವದೇನು ಆಶ್ಚರ್ಯ; ರಾಮಲಕ್ಷ್ಮಣಭರತಶತ್ರುಘ್ನರಂಥ ಮಹಾ ಮಹಿಮರ ವಿಷಯವನ್ನು ತಿಳಿಯುವದಕ್ಕೇ ನಮಗೆ ಎಷ್ಟೋ ಸತ್ವೋತ್ಕರ್ಷತೆ ಬೇಕಾಗಿರುವಾಗ ಇವರನ್ನು ಪುತ್ರರನ್ನಾಗಿ ಪಡೆದ ತಾಯಿತಂದೆಗಳಿನ್ನೆಷ್ಟು ಸಾತ್ತ್ವಿಕರಾಗಿರಬೇಕು! ದಶರಥನನ್ನು ನೋಡಿ. ನಿನಗೆ ಬೇಕಾದಾಗ ನೀನು ಕೇಳಿದ ಎರಡು ವರಗಳನ್ನು ಕೊಡುತ್ತೇ ನೆಂದು ಹಿಂದೆ ಕೈಕೆಯಿಗೆ ಮಾತು ಕೊಟ್ಟಿದ್ದನು. ಈಗ ರಾಮ ನನ್ನು ವನವಾಸಕ್ಕೆ ಕಳುಹಿಸಿ ಭರತನಿಗೆ ರಾಜ್ಯಭಾರವನ್ನು ಒಪ್ಪಿಸ ಬೇಕೆನ್ನುತ್ತಲೆ ಅದರ ಯುಕ್ತಾಯುಕ್ತ ವಿವೇಚನೆಯ ಕಡೆಗೆ ಕಣ್ಣುಹಾಕದೆ **''ಮಾತಾಡಿದರೆ ಹೋಯಿತು, ಮುತ್ತೊಡೆದರೆ ಹೋಯಿತು''** ಎಂಬಂತೆ ತನ್ನ ಮಾತನ್ನು ಉಳಿಸಿಕೊಳ್ಳುವದಕ್ಕಾಗಿ ಅದರಂತೆಯೇ ಆಗಲೆಂದು ಹೇಳಿ ಅದರ ದುಃಖದಿಂದಲೆ ಪ್ರಾಣವನ್ನು

ಕೂಡ ತೊರೆದುಬಿಟ್ಟನು. ಅವನ ಧರ್ಮನಿಷ್ಠತೆ ಇಷ್ಟು ಹೆಚ್ಚಿನದು. ಕೈಕೆಯಿಯಲ್ಲಿಯೂ ಗುಣವಿಲ್ಲದೆ ಇಲ್ಲ. ನಡೆಯುವವನಿಗೆ ಎಡಹುವದು ಸ್ವಭಾವವಷ್ಟೆ. ಯಾವದೋ ಒಂದು ಪಾಪವು ಫಲವನ್ನು ಕೊಡುವದಕ್ಕೆ ಬಂದಾಗ ಆಕೆಯ ಮನಸ್ಸಿನಲ್ಲಿ ಇಂಥ ದುಷ್ಟಕಲ್ಪನೆ ಹುಟ್ಟಿರಬಹುದು. ಆದರೆ ಕುಲೀನಳಾದ ಅವಳ ಮನಸ್ಸಿನಲ್ಲಿ ಆ ಕಲ್ಪನೆಯು ಬೇರುಬಿಟ್ಟುಕೊಳ್ಳಲಾರದೆ ಹೋಯಿತು. ಭರತನ ಮನೋವೃತ್ತಿಯನ್ನು ನೋಡಿದಕೂಡಲೆ ಅವಳಿಗೆ ತನ್ನ ತಪ್ಪು ತನಗೆ ತಿಳಿಯಿತು. ಬೀಳದೆ ಇರುವದೇ ಹೆಚ್ಚಿನದಲ್ಲ; ಬಿದ್ದಮೇಲೆ ಧೈರ್ಯದಿಂದ ಏಳುವದು ಹೆಚ್ಚಿನದು. ಕೈಕೆಯಿಯು ಒಮ್ಮೆ ಅಡ್ಡದಾರಿಗೆ ಹೆಜ್ಜೆಯನ್ನಿಟ್ಟರೂ ಬಹು ದೂರಮುಂದೆ ಹೋಗದೆ ಕ್ಷಿಪ್ರದಲ್ಲಿಯೇ ಸರಿಯಾದದಾರಿಗೆ ತಿರುಗಿದ್ದು ಸ್ತೋತ್ರಾರ್ಹವಾಗಿದೆ. ವಿಚಾರಮಾಡಿ ನೋಡಿದರೆ ಕೈಕೆಯಿಯು ಅಡ್ಡದಾರಿಯನ್ನು ಹಿಡಿದಿದ್ದಳೆಂದು ಹೇಳುವದಕ್ಕೂ ಆಗುವದಿಲ್ಲ. ಮಕ್ಕಳ ಮೇಲಿನ ಪ್ರೇಮವೆಂಬುದು ತಾಯಿಯರಿಂದ ಏನನ್ನು ಬೇಕಾದರೂ ಮಾಡಿಸುವದು. ರಾಮನಿಗೆ ವನವಾಸವಾಗಬೇಕೆಂದು ಕೈಕೆಯಿಯು ಕೇಳಿದ್ದು ಭರತನ ಮೇಲಿನ ಅತ್ಯುತ್ಕಟವಾದ ಪ್ರೇಮದಿಂದಲೇ ಹೊರತು ರಾಮನ ಮೇಲಿನ ಹಗೆತನದಿಂದ ಅಲ್ಲ. ರಾಮನನ್ನು ಬಿಟ್ಟಿರುವದು ಭರತನಿಗೆ ಒಗ್ಗುವದಿಲ್ಲವೆಂದು ತಿಳಿದ ಕೂಡಲೆ ಅವಳು ತನ್ನ ಮನಸ್ಸನ್ನೂ ಭರತನಂತೆಯೇ ಮಾಡಿಕೊಂಡಳು. ಇದರಿಂದಲೇ ಮಗನ ಹಿತವೇ ತನ್ನ ಹಿತನೆಂದು ಅವಳು ತಿಳಿದುಕೊಂಡಿದ್ದಳೆಂದು ಸ್ಪಷ್ಟವಾಗುತ್ತದೆ. ರಾಮನನ್ನು ಪರಮಾತ್ಮನೆಂದು ತಿಳಿದಿದ್ದದ್ದರಿಂದಲೇ ಆ ರಾಮನನ್ನು ವನವಾಸಕ್ಕೆ ಕಳುಹಿಸಿದಂಥ ತಾಯಿಯ ವಿಷಯದಲ್ಲಿ ಆಡಬಾರದ ಮಾತಾಡುವದಕ್ಕೂ ಭರತನು ಹಿಂದೆಗೆಯಲಿಲ್ಲ.

ಇತ್ತ ಭರತಶತ್ರುಘ್ನರು ಬಂದು ನಮಸ್ಕಾರ ಮಾಡುತ್ತಲೇ ಕೌಸಲ್ಯೆಯು ಅವರನ್ನು ಬಾಚಿ ತಬ್ಬಿಕೊಂಡು ರಾಮಲಕ್ಷ್ಮಣರನ್ನು ನೆನಸಿಕೊಂಡು ಗೋಳೋ ಎಂದು ಕಣ್ಣೀರು ಸುರಿಸಿದಳು. ರಾಮಲಕ್ಷ್ಮಣರ ವನವಾಸಕ್ಕೆ ತಾನು ಕಾರಣನೆಂಬುದನ್ನು ಸ್ಮರಿಸಿಕೊಂಡು

ಭರತನು ಬಹುಖಿನ್ನನಾಗಿ ದುಃಖಿಸಿದ್ದಲ್ಲದೆ "ಈ ಪ್ರಯತ್ನಕ್ಕೆ ತಾನೂ ಸಹಾಯಕನಾಗಿರುವನೆಂದು ಕೌಸಲ್ಯೆಯು ತಿಳಿದುಕೊಂಡಿರುವಳೋ ಏನೋ" ಎಂದು ಯೋಚನೆ ಮಾಡಿ ಕೌಸಲ್ಯೆಯ ಎರಡು ಕಾಲು ಗಳನ್ನು ಹಿಡಿದುಕೊಂಡು ಗದ್ಗದ ಧ್ವನಿಯಿಂದ "ಅಮ್ಮ, ಪೂರ್ವ ಜನ್ಮದಲ್ಲಂತು ನಾನು ಬಲಪತ್ತರವಾದ ಪಾಪವನ್ನು ಮಾಡಿರಲೇ ಬೇಕು; ಇಲ್ಲದಿದ್ದರೆ ಅಣ್ಣನ ವನವಾಸಕ್ಕೂ ತಂದೆಯ ವಿಯೋಗಕ್ಕೂ ನಿನ್ನ ಅಪಾರವಾದ ದುಃಖಕ್ಕೂ ಕಾರಣನೆನಿಸುವಂತೆ ನಾನು ಕೈಕೆ ಯಿಯ ಹೊಟ್ಟೆಯಲ್ಲಿ ಹುಟ್ಟುತ್ತಲೇ ಇರಲಿಲ್ಲ. ನಮ್ಮಮ್ಮನ ಗರ್ಭದ ಸಂಪರ್ಕದಿಂದ ನನಗೆ ದುಷ್ಟಕಲ್ಪನೆಗಳು ಬರುವ ಸಂಭವ ವಿದ್ದರೂ ನಾನು ದಶರಥನ ಮಗನೂ ರಾಮನ ತಮ್ಮನೂ ಆಗಿರುವದ ರಿಂದ ಅಂಥವು ನನ್ನ ಮನಸ್ಸನ್ನು ಆಕ್ರಮಿಸಿಕೊಂಡಿಲ್ಲವೆಂದು ನನಗೆ ದೃಢವಾದ ನಂಬಿಕೆ ಇದೆ. ರಾಮನನ್ನು ವನವಾಸಕ್ಕೆ ಕಳುಹಿಸಿ ರಾಜ್ಯವನ್ನು ಅಪಹರಿಸಬೇಕೆಂಬ ಕೈಕೆಯಿಯ ದುರಾಲೋಚನೆಗೆ ನಾನು ಸಹಾಯಕನಾಗಿದ್ದ ಪಕ್ಷದಲ್ಲಿ ತುಂಬಿದ ಸಂಸಾರವುಳ್ಳ ಮನೆಗೂ ದನ ಕರುಗಳಿಂದ ನಿಬಿಡವಾದ ಕೊಟ್ಟಿಗೆಗೂ ಬೆಂಕಿಯನ್ನು ಹಚ್ಚಿದದೋಷವು ನನಗೆಬರಲಿ; ಸ್ತ್ರೀಹತ್ಯೆ, ಭ್ರೂಣಹತ್ಯೆ ಮತ್ತು ವಿಷಪ್ರಯೋಗ– ಇವುಗಳನ್ನು ಮಾಡಿದ್ದರ ಫಲವು ನನ್ನ ಪಾಲಿಗೆ ಬೀಳಲಿ; ವೇದನಿಂದಕ ರಿಗೂ ಕನ್ಯಾವಿಕ್ರಯವನ್ನು ಮಾಡುವವರಿಗೂ ಆಗವ ದುರ್ಗತಿಯು ನನಗೆ ಪ್ರಾಪ್ತವಾಗಲಿ; ಮತ್ತು ನಾನು ಶಾಸ್ತ್ರದಲ್ಲಿ ಹೇಳಿದ ಉಪ ಪಾತಕಗಳನ್ನೂ ಮಹಾಪಾತಕಗಳನ್ನೂ ಮಾತ್ರವೇ ಅಲ್ಲದೆ ಕವಿಕಲ್ಪಿತ ವಾದ ಮಾನಸಿಕವೂ ವಾಚಿಕವೂ ಮತ್ತು ಕಾಯಿಕವೂ ಆದ ಸರ್ವ ಪಾತಕಗಳನ್ನೂ ಮಾಡಿದಂಥಾವನಾಗಲಿ" ಎಂದು ಶಪಥವನ್ನು ಮಾಡಿ ದನು. ಆಗ ಕೌಸಲ್ಯೆಯು "ಭರತ, ನೀನು ರಾಮನ ಪ್ರಾಣವೆಂದೂ ರಾಮನು ನಿನ್ನ ಪ್ರಾಣವೆಂದೂ ನಾನು ಬಲ್ಲೆ. ಚಂದ್ರನಿಂದ ವಿಷದ ಮಳೆ ಬಿದ್ದರೂ, ಹಿಮದಿಂದ ಅಗ್ನಿ ಹುಟ್ಟಿದರೂ, ನೀರಿನಲ್ಲಿ ಜೀವಿಸುವ ಪ್ರಾಣಿಗಳು ನೀರಿನ ಮೇಲೆ ಹಗೆತನವನ್ನು ಮಾಡಿದರೂ, ಜ್ಞಾನಿಯು ಭಗವದ್ವಿಷಯವಾದ ಸಂಶಯವನ್ನು ಹೊಂದಿದರೂ, ನೀನು ಮಾತ್ರ

ಎಂದೆಂದಿಗೂ ರಾಮನ ವಿಷಯದಲ್ಲಿ ವಿರುದ್ಧವಾದ ಅಭಿಪ್ರಾಯವನ್ನು ಪಡುವವನಲ್ಲ. ಆಗಿಹೋದದ್ದಕ್ಕೆ ದುಃಖವನ್ನು ಮಾಡಿ ಫಲವೇನು! ನನಗೆ ನೀನೇ ಹತ್ತಿರದಲ್ಲಿರುವ ರಾಮ'' ಎಂದು ಮುಂತಾಗಿ ಹೇಳಿ ಭರತನನ್ನು ಸಮಾಧಾನಗೊಳಿಸಿದಳು. ಇದನ್ನು ನೋಡಿದ ಜನರೆಲ್ಲರೂ ''ನಿಜವಾಗಿ ಈಕೆಯು ರಾಮನ ತಾಯಿ'' ಎಂದು ಮುಕ್ತಕಂಠರಾಗಿ ಹೊಗಳಿದರು.

ಇಷ್ಟರಲ್ಲಿ ವಸಿಷ್ಠಮಹರ್ಷಿಗಳು ದಶರಥನ ದೇಹಕ್ಕೆ ವೈದಿಕ ರೀತಿಯಿಂದ ಸ್ನಾನವನ್ನು ಮಾಡಿಸಿ ಅತ್ಯಂತಸುಂದರವಾದ ವಿಮಾನ ದಲ್ಲಿ ಕೂಡಿಸಿ ಶ್ಮಶಾನಯಾತ್ರೆಗೆ ಹೊರಡಿಸಿದರು. ಸರ್ವರೂ ಅದರ ಹಿಂದೆ ಹೊರಟರು. ಮೂವರು ರಾಣಿಯರಿಗೂ ದುಃಖವು ಉಕ್ಕಿ ಬರಲು ತಾವೆಲ್ಲರೂ ಸಹಗಮನಮಾಡುತ್ತೇವೆಂದು ಸಿದ್ಧಮಾಡಿಕೊಂಡ ರು. ಭರತನು ಅವರ ಕಾಲುಗಳನ್ನು ಹಿಡಿದುಕೊಂಡು ಅವರ ಸಂಕ ಲ್ಪವನ್ನು ಬಿಡಿಸಿದನು. ಲೋಕದಲ್ಲಿ ಸ್ತ್ರೀಯರಿಗೆ ಪತಿಯೇ ಸರ್ವಸ್ವ ವೆಂಬುದೂ ಪತಿಯನ್ನಗಲಿದ ಬಾಳು ಬಾಳೇ ಅಲ್ಲವೆಂಬುದೂ ನಿಜ. ಆದ್ದರಿಂದಲೇ ಪತಿಯು ಮೃತನಾದಾಗ ಎಷ್ಟೋಜನ ಸಾಧ್ವಿಯರು ಸಹಗಮನವನ್ನು ಮಾಡಿರುವರು. ಅದರೆ ಪತಿಯ ಮೇಲಿನ ಪ್ರೇ ಮಕ್ಕೆ ಅದೇ ಪರಾಕಾಷ್ಠಸ್ಥಿತಿಯಲ್ಲ. ಪತಿಯೇ ತನ್ನ ಸರ್ವಸ್ವ ವೆಂದು ಪತಿಯ ದೇಹದೊಡನೆ ತಮ್ಮ ದೇಹವನ್ನು ಸುಟ್ಟು ಬಿಡು ವದು. ದೇಹವೇ ತಾವೆಂದು ತಿಳಿಯುವಂಥ ಮೂಢರ ನಡವಳಿಕೆ. ಎಂದಿದ್ದರೂ ಒಂದು ದಿನ ಬಿದ್ದುಹೋಗುವಂಥ ದೇಹವನ್ನು ತಾವೆಂದು ತಿಳಿದರೆ ತಮ್ಮ ಮೇಲೆ ತಾವೇ ಕ್ಷುದ್ರತ್ವವನ್ನು ಆರೋಪಣೆಮಾಡಿ ಕೊಂಡಂತಾಗುತ್ತದೆ. ವಿಚಾರಮಾಡಿದರೆ ಶರೀರವೆಂದಿಗೂ ಆತ್ಮವಲ್ಲ. ಶರೀರದಲ್ಲಿ ಅನೇಕ ಬಗೆಯ ಜ್ಞಾನಗಳನ್ನು ಪಡೆಯುತ್ತ ಆನಂದ ವನ್ನು ಪಡುವಂಥ ಚೇತನಸ್ವರೂಪನಾದ ಸ್ವಾಮಿಯೊಬ್ಬನಿದ್ದಾನೆ. ಅವನೇ ಆತ್ಮ. ದೇಹವು ಅವನ ಮನೆ. ದೇಹದಲ್ಲಿ ಕಣ್ಣು ಮತ್ತು ಕಿವಿ ಮೊದಲಾದವುಗಳೆಲ್ಲಾ ಇದ್ದರೂ ಆ ಸ್ವಾಮಿ ಇಲ್ಲದೆ ಹೋದರೆ ಕಾಣುವದೂ ಇಲ್ಲ; ಕೇಳುವದೂ ಇಲ್ಲ. ಈ ಚೇತನವನ್ನೇ ಸ್ವಾಮಿ

ಯೆಂದು ವಿವೇಕಿಗಳು ತಿಳಿಯುವರು. ಪತಿಯ ದೇಹದಲ್ಲಿರುವ ಚೇತನವನ್ನೇ ತನ್ನ ಸರ್ವಸ್ವವೆಂದು ತಿಳಿಯುವದು ಸತಿಗೆ ಯೋಗ್ಯವಾದದ್ದು. ಪತಿಯೊಡನೆ ಸಹಗಮನ ಮಾಡುವದೆಂದರೆ ತನ್ನ ಚೇತನವನ್ನು ಪತಿಯ ಚೇತನದಲ್ಲಿ ಸೇರಿಸಿ ಒಂದೇ ಮಾಡಿಬಿಡುವದು. ಸುಮ್ಮನೆ ತಮ್ಮ ದೇಹವನ್ನು ಪತಿಯ ದೇಹದೊಡನೆ ಸುಟ್ಟಮಾತ್ರಕ್ಕೇ ನಿಜವಾದ ಸಹಗಮನವಾಗುವದಿಲ್ಲ. ತನ್ನ ಮನಸ್ಸನ್ನು ನಿರಂತರವಾಗಿ ಪತಿಯಲ್ಲಿಡುವದರಿಂದ ಸಹಗಮನವು ಸಿದ್ಧಿಸುವದು. ಹಾಗಾದರೆ ತನ್ನ ದೇಹವನ್ನು ಪತಿಯ ದೇಹದೊಡನೆ ಸುಡುವದು ವ್ಯರ್ಥವೇ ಆಗುವದೆಂದು ಮಾತ್ರ ತಿಳಿಯಬಾರದು. ಸತಿಯ ಚೇತನವು ಪತಿಯ ಚೇತನದಲ್ಲಿ ಒಂದಾಗ ಬೇಕಾದರೆ ಸತಿಯ ದೇಹವು ಪತಿಯಲ್ಲಿ ಸೇರುವದಕ್ಕಿಂತಲೂ ಸತಿಯ ಮನಸ್ಸು ಪತಿಯಲ್ಲಿ ಸೇರುವದು ಉತ್ಕೃಷ್ಟವಾದದ್ದು. ಹೇಗೆಂದರೆ ವಿಚಾರಮಾಡಿರಿ. ನನಗೆ ಈತನೇ ಜನ್ಮಜನ್ಮಕ್ಕೂ ಪತಿಯಾಗಬೇಕೆಂದು ಒಬ್ಬ ಸತಿಯು ಪತಿಯೊಡನೆ ಭಸ್ಮೀಭೂತಳಾಗುತ್ತಾಳೆ. ಆ ಸತಿಯೂ ಪತಿಯೂ ದೇಹವೇ ಆಗಿದ್ದಪಕ್ಷದಲ್ಲಿ ಎರಡು ದೇಹಗಳೂ ನಮ್ಮ ಕಣ್ಣೆದುರಿಗೇ ಸುಟ್ಟು ಬೂದಿಯಾಗುವದರಿಂದ ಅವರಿಬ್ಬರಿಗೂ ಇನ್ನು ಜನ್ಮವೆಂಬುದೇ ಇಲ್ಲ. ಏಕೆಂದರೆ ಆ ಬೂದಿ ಮತ್ತೆ ಹೇಗೆ ದೇಹವಾದೀತು? ಹೀಗೆ ಪುನರ್ಜನ್ಮವೇ ಇಲ್ಲದೆ ಹೋದರೆ ನಾವು ಮಾಡುವ ಒಳ್ಳೇ ಕೆಲಸಗಳಾಗಲಿ ಕೆಟ್ಟಕೆಲಸಗಳಾಗಲಿ ಮುಂದೆ ಫಲವನ್ನು ಕೊಡುವವೆಂದು ನಿರೀಕ್ಷಿಸುವದಕ್ಕೆ ಕಾರಣವೇ ಇರುವದಿಲ್ಲ. ಮತ್ತು ಈಗ ಒಬ್ಬರು ಸುಖಿಗಳಾಗಿಯೂ ಇನ್ನೊಬ್ಬರು ದುಃಖಿಗಳಾಗಿಯೂ ಇರುವದಕ್ಕೆ ಕಾರಣವನ್ನು ಹೇಳುವದಕ್ಕೂ ಬರುವದಿಲ್ಲ. ಇಷ್ಟೇ ಅಲ್ಲ. ಬರೀ ದೇಹಕ್ಕೆ ಸುಖದುಃಖಗಳನ್ನು ತಿಳಿಯುವ ಶಕ್ತಿ ಕೂಡ ಇಲ್ಲ. ಹೆಣಕ್ಕೆ ದೇಹವೆಲ್ಲಾ ಇದ್ದೇ ಇರುವದು; ಸುಖದುಃಖಗಳು ಮಾತ್ರ ತಿಳಿಯುವದಿಲ್ಲ. ಆದ್ದರಿಂದ ಸುಖದುಃಖಗಳನ್ನು ಅನುಭವಿಸುವದಕ್ಕೆ ದೇಹಕ್ಕಿಂತ ಬೇರೆಯಾದ ಇನ್ನೊಂದಿರಬೇಕಾಯಿತು. ಅದು ಯಾವದೆಂದರೆ ಮನಸ್ಸು. ಆ ಮನಸ್ಸು ಕೂಡ ನಮ್ಮ ಆತ್ಮವಲ್ಲ. ಅದು ನಮ್ಮ

ಸೂಕ್ಷ್ಮದೇಹ; ಆದರೆ ಅದು ನಮ್ಮ ಆತ್ಮಕ್ಕೆ ಸ್ಥೂಲಶರೀರಕ್ಕಿಂತ ಹತ್ತಿರದಲ್ಲಿರುವದು. ಆತ್ಮವನ್ನು ಹಣವೆಂದಿಟ್ಟುಕೊಳ್ಳಿ. ಮನಸ್ಸೆಂಬುದು ಆ ಹಣವನ್ನಿಟ್ಟುಕೊಂಡಿರುವ ತೆಳುವಾದ ಬಟ್ಟೇಚೀಲ. ಶರೀರವೆಂಬುದು ಆಚೀಲವನ್ನು ಭದ್ರವಾಗಿಟ್ಟುಕೊಂಡಿರುವ ಕಬ್ಬಿಣದಪೆಟ್ಟಿಗೆ. ಆದ್ದರಿಂದ ಆತ್ಮಕ್ಕೆ ಶರೀರಕ್ಕಿಂತಲೂ ಮನಸ್ಸು ಹತ್ತಿರವಾದದ್ದು. ತೆಳುವಾದ ಬಟ್ಟೇಚೀಲದ ಬಾಯಿ ತೆರೆದೊಡನೆ ಹಣವು ಕಾಣುವಂತೆ ಮನಸ್ಸನ್ನು ಭೇದಿಸಿ ನೋಡಿದೊಡನೆ ಆತ್ಮಸ್ವರೂಪವೆದ್ದು ತೋರುವದು. ಮನಸ್ಸು ಕೂಡ ತಾನಲ್ಲವೆಂಬುದು ದೇಹಾತ್ಮಬುದ್ಧಿಯನ್ನು ಕಳೆದುಕೊಂಡ ಮೇಲಿನ ಮಾತು. ಇರಲಿ. ಪತಿಯ ಚೇತನದಲ್ಲಿ ಸತಿಯ ಚೇತನವು ಒಂದಾಗಬೇಕಾದರೆ ಪತಿಯಲ್ಲಿ ಸತಿಯ ಮನಸ್ಸು ನಿಲ್ಲಬೇಕು. ಪತಿಯು ನಮ್ಮ ಸ್ಥೂಲದೃಷ್ಟಿಗೆ ಕಾಣುವ ಸ್ಥೂಲದೇಹದಲ್ಲಿರುವವರಿಗೂ ಪತಿಯನ್ನನುಸರಿಸಿ ನಡೆಯಬೇಕು. ಪತಿಯು ಮೃತನಾದರೆ ಸತಿಯು ತನ್ನ ಮನಸ್ಸನ್ನು ಇತರ ವಿಷಯಗಳಲ್ಲಿಡದೆ ಪತಿಯಲ್ಲಿಯೇ ಇಟ್ಟು ಪತಿಪರಾಯಣೆಯಾಗಿರಬೇಕು. ಒಂದು ಸ್ಥೂಲದೇಹವು ಬೂದಿಯಾದರೂ ಅದರೊಳಗಿದ್ದ ಮನಸ್ಸೆಂಬ ಸೂಕ್ಷ್ಮದೇಹವು ಇನ್ನೊಂದು ದೇಹವನ್ನು ಪಡೆಯುತ್ತ ಹೋಗುವದು. ಹೀಗಾಗುವದರಿಂದ ಸತಿಗೆ ಮುಂದಿನ ಜನ್ಮದಲ್ಲಿ ಅದೇ ಪತಿಯೇ ದೊರೆಯುವದಕ್ಕಾಗುತ್ತದೆ. ದೇಹವೇ ಸತಿಪತಿಗಳಾಗುವ ಪಕ್ಷದಲ್ಲಿ ಯಾವ ವ್ಯವಸ್ಥೆಯೂ ಸಾಗುವದಿಲ್ಲ. ಪತಿಯು ಸತ್ತನೆಂದು ದುಃಖವು ತೋರುವಾಗ ಸತಿಗೆ ದೇಹಾತ್ಮಬುದ್ಧಿಯೇ ಬಂದಿರಬೇಕು. ಇದು ದೊಡ್ಡ ಅವಿವೇಕ. ಪತಿಯೂ ಸತಿಯೂ ಒಂದೇ ಮನಸ್ಸಿನವರಾಗಿ ವ್ಯವಹಾರಮಾಡುತ್ತಿರುವರಷ್ಟೆ. ಆದ್ದರಿಂದ ಒಬ್ಬರ ಮನಸ್ಸು ಇನ್ನೊಬ್ಬರ ಕಡೆಗೆ ಒಲಿಯುತ್ತಲೇ ಇರುವದು. ಒಂದಾಗಿ ಕೂಡಿದ್ದದ್ದಕ್ಕೆ ಅಗಲಿಕೆ ಸಹನವಾಗುವದಿಲ್ಲ. ಒಬ್ಬರು ಸತ್ತಾಗ ಇನ್ನೊಬ್ಬರು ಅತ್ತರೆ ಅಳುವವರ ಮನಸ್ಸು ಸತ್ತವರನ್ನು ಆಕರ್ಷಣೆಮಾಡುತ್ತದೆ. ಪತಿಯನ್ನು ಅನುಸರಿಸಿ ಸತಿಯು ಹೋಗುವದು ಧರ್ಮವಷ್ಟೆ. ಸತಿಯು ತನ್ನ ಗೋಳಿನಿಂದ ಪತಿಯನ್ನು ಎಳೆಯುವದು ಯಾವ

ನ್ಯಾಯ? ಪತಿಯಿದ್ದ ಕಡೆ ಅವನಿಗೆ ಸರ್ವಾನುಕೂಲಗಳೂ ಆಗು ವಂತೆಯೂ ಮತ್ತೆ ತಪ್ಪಿಬ್ಬರ ಸಮಾಗಮವಾಗುವಂತೆಯೂ ಸತಿಯು ದೇವರಿಗೆ ಹರಕೆಯನ್ನು ಹೊರುತ್ತಿರಬೇಕು. ಆಕೆ ಇನ್ನೇನೂ ಮಾಡ ಬೇಕಾದ್ದಿಲ್ಲ. ಭರತನು ಈ ತತ್ತ್ವವನ್ನು ತನ್ನ ತಾಯಿಯರಿಗೆ ಮನ ಗಾಣಿಸಿ ಸಹಗಮನವನ್ನು ನಿಲ್ಲಿಸಿದನು. ಆ ಮೇಲೆ ಚಂದನ, ಅಗರು ಮುಂತಾದ ಸುಗಂಧದ್ರವ್ಯಗಳಿಂದ ಸುಂದರವಾದ ಚಿತಿಯನ್ನು ನಿರ್ಮಿಸಿ ಭರತನು ದಶರಥನ ದಹನವಿಧಿಯನ್ನು ನೆರವೇರಿಸಿ ಸ್ನಾನ ಮಾಡಿ ತಿಲಾಂಜಲಿಯನ್ನು ಬಿಟ್ಟು ದಶರಾತ್ರವಿಧಿಯನ್ನು ಸಾಂಗ ವಾಗಿ ನೆರವೇರಿಸಿದನು. ಪುರೋಹಿತರಾದ ವಸಿಷ್ಠ ಮಹರ್ಷಿಗಳ ಆಜ್ಞೆಯಂತೆ ರಾಜವೈಭವಕ್ಕೆ ಅನುಗುಣವಾಗಿ ದಾನಧರ್ಮಗಳೆಲ್ಲಾ ನಡೆದವು.

## ಭರತನು ರಾಜ್ಯಭಾರವನ್ನೊಲ್ಲೆನೆಂದದ್ದು

ದಶರಥನಂಥ ರಾಜನಿಗೆ ವಸಿಷ್ಠರಂಥ ಪುರೋಹಿತರಿದ್ದದ್ದು ಸರಿ ಯಾಗಿ ಹೊಂದಿತ್ತು. ವಸಿಷ್ಠರ ಪೌರೋಹಿತ್ಯವು ಶುಭಾಶುಭ ಸಮ ಯಗಳಲ್ಲಿ ಮನೆಗೆ ಬಂದು ಏನಾದರೂ ಒಂದೆರಡು ಮಂತ್ರಗಳನ್ನು ಗೊಣಗಿ ಆದಷ್ಟು ದುಡ್ಡೆಳೆದುಕೊಂಡು ಹೋಗತಕ್ಕಂಥಾದ್ದಾಗಿರ ಲಿಲ್ಲ. ದುಡ್ಡೆಂಬುದು ಅವರಿಗೆ ಕಸಕ್ಕಿಂತ ಕಡೆ. ಅವರು ದುಡ್ಡಿಗಾಗಿ ಎಂದಿಗೂ ಪೌರೋಹಿತ್ಯವನ್ನು ಮಾಡತಕ್ಕವರಲ್ಲ; ಬೇಡಿದರೆ ತಮ್ಮ ಮಹಿಮೆಯಿಂದ ಭೂಮಂಡಲಕ್ಕೆಲ್ಲಾ ಸುವರ್ಣದ್ರವ್ಯಗಳನ್ನು ಸೂರೆ ಮಾಡುವಂಥ ತಪಸ್ಸಾಮರ್ಥ್ಯವುಳ್ಳವರು. ದುಡ್ಡಿಗಾಗಿ ಮಾಡುವ ಪೌರೋಹಿತ್ಯವು ನಿಂದ್ಯವಾದ ಕರ್ಮ. ದುಡ್ಡಿಗೂ ತಾನು ಹೇಳುವ ಮಂತ್ರಕ್ಕೂ ಗಂಟಿದ್ದಷ್ಟು ವೇದವಿಕ್ರಯವಾಗುವದರಿಂದ ಪೌರೋ ಹಿತ್ಯವು ಹೆಚ್ಚು ನಿಂದ್ಯವಾಗುವುದು. ವಸಿಷ್ಠರು ವಹಿಸಿದ್ದ ಪೌರೋ ಹಿತ್ಯವು ಲೋಕಹಿತಾರ್ಥವಾಗಿ ಮಹಾಪ್ರಸಿದ್ಧರಾದ ಸೂರ್ಯವಂಶದ ರಾಜರ ಮೂಲಕ ಭೂಮಂಡಲದಲ್ಲಿ ಧರ್ಮವನ್ನು ರಕ್ಷಣೆ ಮಾಡ ಬೇಕೆಂದು ವಸಿಷ್ಠರು ಆ ಅರಸರ ಪೌರೋಹಿತ್ಯವನ್ನು ಸ್ವೀಕರಿಸಿದರು. ಈಗಿನ ಪುರೋಹಿತರು ಸ್ವಕಾರ್ಯದ ಕಡೆಗೆ ಲಕ್ಷ್ಯವಿಟ್ಟು ಗೃಹಸ್ಥರ

ಸ್ವರಕ್ಕೇ ಶ್ರುತಿಯನ್ನು ಹಿಡಿಯುವಂಥವರಾಗಿ ತಮ್ಮ ಪ್ರತಿಷ್ಠೆಯನ್ನು ಕಳೆದುಕೊಂಡಿರುವರು. ಈಗ ನಾವು ಪುರೋಹಿತರನ್ನು ಕಂಡಕೂಡಲೇ ಅವರಿಗೆ ಗೌರವವನ್ನು ತೋರಿಸುವದೆಂಬುದು ನಮ್ಮಲ್ಲಿ ಉಳಿದು ಕೊಂಡು ಬಂದಿರುವ ಸಂಸ್ಕಾರದ ಗುರ್ತು. ಪೂರ್ವದಲ್ಲಿ ಹೀಗಿರಲಿಲ್ಲ. ಪುರೋಹಿತರಿಗೆ ಮನೆಯ ಯಜಮಾನನ ಮೇಲೆ ಕೂಡ ಅಧಿಕಾರ ವಿತ್ತು. ಪುರೋಹಿತರ ಮಾತಿಗೆ ಎರಡಿರಲಿಲ್ಲ. ಹೇಗೆ ಮಾಡಿದರೆ ಶ್ರೇಯಸ್ಸಾದೀತೆಂಬುದನ್ನು ತಿಳಿದು ಅದರಂತೆ ಮನೆಯ ಯಜಮಾನ ನಿಗೆ ಪ್ರವೃತ್ತಿಯನ್ನುಂಟುಮಾಡುವದು ಪುರೋಹಿತರ ಕೆಲಸ. ಹೀಗೆ ಪೌರೋಹಿತ್ಯವನ್ನು ಮಾಡಬೇಕೆಂಬುವರು ಮೊದಲು ವಸಿಷ್ಠರ ಹೆಸ ರನ್ನು ಹೇಳಿ ಆ ಮೇಲೆ ಆ ಕೆಲಸಕ್ಕೆ ಕೈಹಾಕಬೇಕು. ದಶರಥನು ಸ್ವರ್ಗಸ್ಥನಾದನು. ರಾಮನು ವನವಾಸಕ್ಕೆ ಹೋದನು. ಭರತನಿಗೆ ಏನುಮಾಡುವದಕ್ಕೂ ತೋಚದು. ರಾಜಪತ್ನಿಯರಿಗೆ ಮಹತ್ತರ ವಾದ ದುಃಖ. ಅಮಾತ್ಯರು ಎದುರಾಗಿ ನಿಂತು ಮಾತಾಡಲಾರರು. ಹೀಗಾದರೆ ಪ್ರಜಾ ಪರಿಪಾಲನೆ ಹೇಗಾಗಬೇಕು! ಇದನ್ನೆಲ್ಲಾ ಸಮಾ ಲೋಚನೆ ಮಾಡಿ ವಸಿಷ್ಠಮಹರ್ಷಿಗಳು ಒಂದು ದಿನ ರಾಜಸಭೆಯನ್ನು ಸೇರಿಸಿ ಅಲ್ಲಿಗೆ ಭರತನನ್ನು ಬರಮಾಡಿಕೊಂಡು ಅವನಿಗೆ ಸಮಯೋ ಚಿತವಾದ ಬುದ್ಧಿವಾದಗಳನ್ನು ಹೇಳುವದಕ್ಕೆ ಮೊದಲು ಮಾಡಿದರು. ಈಗ ನಡೆದ ಅಸಂಗತವ್ಯಾಪಾರಗಳಿಗೆಲ್ಲಾ ಕೈಕೆಯಿಯ ಕುಟಿಲತನವೇ ಕಾರಣವೆಂದು ಅವರು ತಮ್ಮ ಭಾಷಣಕ್ಕೆ ಪೀಠಿಕೆಯನ್ನು ಹಾಕಿದರು. ರಾಮನು ವನವಾಸಕ್ಕೆ ಹೋದದ್ದಕ್ಕಾಗಿ ಎಲ್ಲರಿಗೂ ಕಣ್ಣೀರು ಬಂದಿ ದ್ದರೂ ದಶರಥನು ಅದಕ್ಕಾಗಿ ತನ್ನ ದೇಹವನ್ನೇ ಕೊಟ್ಟುಬಿಟ್ಟದ್ದರಿಂದ ಅವನ ಪ್ರೇಮವೇ ನಿಜವಾದದ್ದೆಂದು ಅವರು ಅದನ್ನು ಬಗೆಬಗೆಯಿಂದ ಪ್ರಶಂಸೆಮಾಡಿದರು. ಇನ್ನು ರಾಮನು ವನವಾಸಕ್ಕೆ ಸಂತೋಷ ದಿಂದ ಒಪ್ಪಿದ್ದನ್ನೂ ನಾರುಬಟ್ಟೆಗಳನ್ನು ಆದರದಿಂದ ಉಟ್ಟಿದ್ದನ್ನೂ ಉತ್ಸಾಹದಿಂದಲೇ ಪ್ರಯಾಣಮಾಡಿದ್ದನ್ನೂ ಹೇಳಬೇಕಾದ ಸಮಯ ಒದಗಿತು. ಆಗ ವಸಿಷ್ಠರಿಗೆ ದುಃಖವು ಉಕ್ಕಿ ಉಕ್ಕಿ ಬರಲು ಅವರ ಕಣ್ಣೀರು ಕೋಡಿಯಾಗಿ ಹರಿಯಿತು. ಅವರು ಗದ್ಗದಸ್ವರದಿಂದ

ಏನೇನೋ ಹಲುಬಿದರು. ಯಾರಿಗೂ ಏನೂ ತಿಳಿಯುಲಿಲ್ಲ. ಆ ದುಃಖದಿಂದ ಎಲ್ಲರಿಗೂ ಸ್ವಲ್ಪ ಹೊತ್ತು ವಿಸ್ಮೃತಿಯುಂಟಾಯಿತು. ವಸಿಷ್ಠರು ಮಹಾಜ್ಞಾನಿಗಳೆಂದು ಪ್ರಸಿದ್ಧರಾದವರು. ದೇಹವು ಆತ್ಮವಲ್ಲನೆಂಬುವುದನ್ನು ಯಾರಾದರೂ ಅವರನ್ನು ಎಚ್ಚರಿಸಹೋಗುವ ದೆಂಬುದು ಮಿಂಚುಹುಳು ಸೂರ್ಯನನ್ನು ಬೆಳಗಿದಂತೆಯೇ ಸರಿ. ಅವರು ಇಂಥ ಜ್ಞಾನಿಗಳಾಗಿದ್ದರೂ ಪರಮಪ್ರೇಮರೂಪನಾದ ರಾಮನು ವ್ಯವಹಾರದೃಷ್ಟಿಯಿಂದ ಕಷ್ಟಕ್ಕೊಳಗಾದನೆಂದ ಕೂಡಲೆ ಅವರ ನಿರ್ಗುಣಜ್ಞಾನವೆಲ್ಲಾ ನಿರ್ಗುಣವಾಗಿ ಹೋಗಿ ಅವರೇ ದುಃಖ ಸಾಗರದ ಅಲೆಗಳಿಂದ ಕೊಚ್ಚಿಕೊಂಡು ಹೋದವರು ದಡಕ್ಕೆ ಬರು ವುದೇ ಕಷ್ಟವಾಯಿತು. ನಿಜವಾಗಿ ಅವರು ಆತ್ಮಸ್ವರೂಪವನ್ನು ತಿಳಿದವರೇ ಸರಿ. ತಮ್ಮ ಚೈತನ್ಯವೂ ರಾಮನ ಚೈತನ್ಯವೂ ಒಂದೇ ಆಗಿದ್ದದ್ದರಿಂದ ರಾಮನಿಗೊದಗಿದ ಕಷ್ಟವನ್ನು ತಮ್ಮ ಕಷ್ಟದಂತೆ ಮಾಡಿಕೊಂಡು ವ್ಯವಹಾರದೃಷ್ಟಿಯಿಂದ ದುಃಖಕ್ಕೆ ಭಾಗಿಗಳಾದರೇ ಹೊರತು ಮತ್ತೇನೂ ಇಲ್ಲ. ಈ ದುಃಖದ ಆಯಾಸದಿಂದ ಚೇತರಿಸಿ ಕೊಂಡ ಮೇಲೆ ವಸಿಷ್ಠರು ಭರತನಿಗೆ ಉಪದೇಶ ಮಾಡುವದಕ್ಕೆ ತೊಡಗಿದರು. "ಅಪ್ಪ, ಭರತ, ಕೇಳು; ಆಗತಕ್ಕದ್ದಾಗಿಯೇ ತೀರು ವದು. ನಮಗಾಗುವ ಸುಖಕ್ಕಾಗಲಿ ದುಃಖಕ್ಕಾಗಲಿ ನಮ್ಮ ನಮ್ಮ ಪೂರ್ವಜನ್ಮದ ಕರ್ಮವೇ ಕಾರಣವಾಗಿರುವದು. ಹೀಗಿರುವದರಿಂದ ಇತರರ ಮೇಲೆ ದೂರು ಹೊರಿಸುವದರಿಂದ ಪ್ರಯೋಜನವೇನು? ದಶರಥನ ಮರಣಕ್ಕಾಗಿ ದುಃಖವನ್ನು ಹಚ್ಚಿಕೊಳ್ಳಬೇಕಾದ್ದಿಲ್ಲ. ಅವನು ಇಲ್ಲಿ ಬೇಕುಬೇಕಾದ ಸುಖಗಳನ್ನೆಲ್ಲಾ ಅನುಭವಿಸಿದ್ದಾಯಿತು; ಬೇಕಾದಷ್ಟು ಪುಣ್ಯಕರ್ಮಗಳನ್ನು ಮಾಡಿ ಅಪಾರವಾದ ಕೀರ್ತಿ ಯನ್ನು ಸಂಪಾದಿಸಿ ಸ್ವರ್ಗಸುಖವನ್ನು ಸೂರೆಗೊಂಡದ್ದಾಯಿತು; ಹೆಚ್ಚಾಗಿ ಹೇಳುವದೇನು! ನಿಮ್ಮ ಅಣ್ಣತಮ್ಮಂದಿರಂಥ ಸತ್ಸಂತತಿ ಯನ್ನು ಪಡೆದದ್ದಾಯಿತು; ಇನ್ನೇನಾಗಬೇಕು? ಅವನಿಗಾಗಿ ಇನ್ನೇಕೆ ಅಳಬೇಕು! ಸ್ವಧರ್ಮವನ್ನು ಬಿಟ್ಟು ವಿಷಯಲಂಪಟ ನಾಗಿ ವೇದಸಂಸ್ಕಾರವಿಲ್ಲದಂಥ ಬ್ರಾಹ್ಮಣನಿಗೆ ಅಳಬೇಕು. ರಾಜ

ನೀತಿಯನ್ನರಿಯದೆ ಪ್ರಜೆಗಳನ್ನು ತನ್ನ ಪ್ರಾಣದಂತೆ ಭಾವಿಸದೆ ಇರುವ ರಾಜನಿಗೆ ಅಳಬೇಕು. ಬೇಕಾದಷ್ಟು ಹಣಗಾರನಾಗಿದ್ದೂ ಜಿಪುಣನಾಗಿ ಅತಿಥಿಗಳನ್ನೂ ದೇವರನ್ನೂ ಪೂಜಿಮಾಡದಂಥ ವೈಶ್ಯ ನಿಗೆ ಅಳಬೇಕು. ತಿಳಿದವರೆನಿಸಿಕೊಂಡಿರುವವರನ್ನು ಕಂಡರೆ ಆಗದೆ ತಾನೇ ತಿಳಿದವನೆಂಬ ಪ್ರತಿಷ್ಠೆಯನ್ನು ತೋರಿಸಿಕೊಳ್ಳುವಂಥ ಶೂದ್ರ ನಿಗೆ ಅಳಬೇಕು. ಗಂಡನನ್ನು ಧಿಕ್ಕರಿಸಿ ಜಗಳಗಂಟಿಯಾಗಿ ಮನ ಸ್ಸುಬಂದಂತೆ ನಡೆಯುವಂಥ ಹೆಂಗಸಿಗೆ ಅಳಬೇಕು. ತನ್ನ ವ್ರತ ವನ್ನು ವಿಾರಿ ಗುರುವಿನ ಆಜ್ಞೆಯನ್ನು ಉಲ್ಲಂಘಿಸುವಂಥ ಬ್ರಹ್ಮ ಚಾರಿಗೆ ಅಳಬೇಕು. ವಿಷಯಗಳ ಕಡೆಗೆ ಸೋಲುತ್ತ ವಿವೇಕವೈರಾಗ್ಯ ವಿಲ್ಲದ ಸಂನ್ಯಾಸಿಗೆ ಅಳಬೇಕು. ಯಾರ ಧರ್ಮನಿಷ್ಠತೆಯ ವಿಷಯ ದಲ್ಲಿ ದಶದಿಕ್ಕುಗಳಲ್ಲಿಯೂ ದುಂದುಭಿಧ್ವನಿಯು ಕೇಳಬರುವುದೋ ಆ ದಶರಥನಿಗಾಗಿ ಅಳಬೇಕಾದ್ದಿಲ್ಲ. ಮಗು, ಭರತ, ದಶರಥನಂಥ ರಾಜನು ಹಿಂದೆ ಇರಲಿಲ್ಲ; ಮುಂದೆ ಆಗುವದಿಲ್ಲ. ಆದ್ದರಿಂದ ಅವನ ವಿಷಯವಾಗಿ ದುಃಖಿಸುವದನ್ನು ಬಿಟ್ಟು ಅವನ ಆಜ್ಞೆಯನ್ನು ತಲೆ ಯಲ್ಲಿ ಹೊತ್ತು ಕೃತಾರ್ಥನಾಗು. ತಂದೆಯ ಆಜ್ಞೆಯನ್ನು ಅವನ ಕಣ್ಣೆದುರಿಗೆ ಪಾಲಿಸುವದು ದೊಡ್ಡದಲ್ಲ. ಅದು ದಾಕ್ಷಿಣ್ಯದಿಂದಾ ದರೂ ಆಗುವದು. ತಂದೆಯು ಮರೆಯಾಗಿರುವಾಗ ಅವನ ಆಜ್ಞೆ ಯನ್ನು ಪಾಲಿಸಿದರೆ ಆವನ ಪೂಜ್ಯತೆಯನ್ನು ಪ್ರೇಮದಿಂದ ಗೌರವಿಸಿ ದಂತೆ ಆಗುವದು. ನೀನು ರಾಜ್ಯಭಾರವನ್ನು ವಹಿಸಬೇಕೆಂದು ನಿಮ್ಮ ತಂದೆಯು ಅಪ್ಪಣೆಯಾಗಿದೆ. ನಿಮ್ಮಪ್ಪನು ಮಹಾಸತ್ಯಸಂಕ ಲ್ಪನು. ಹೆಂಡತಿಗೆ ಕೊಟ್ಟ ಮಾತಿಗಾಗಿ ಹಿರೀ ಮಗನನ್ನು ಕೂಡ ಕಾಡಿಗೆ ಕಳುಹಿಸಿರುವದೇ ಅವನ ಸತ್ಯವ್ರತತ್ವಕ್ಕೆ ಧ್ವಜಪ್ರಾಯವಾಗಿ ರುವದು. ಈಗ ಅವನ ಮಾತನ್ನು ಸತ್ಯವಾಗಿ ಮಾಡುವ ಭಾರವು ನಿನ್ನ ಮೇಲಿರುವದು. ಇದನ್ನು ನಿರ್ವಹಿಸುವದರಿಂದಲೇ ನಿನಗೆ ಸರ್ವ ಮಂಗಳಗಳೂ ಆಗುವವು. ಪರಶುರಾಮನು ಮಾತೃಹತ್ಯವನ್ನು ಮಾಡುವದಕ್ಕೆ ಕೂಡ ಹಿಂದೆಗೆಯಲಿಲ್ಲ; ಆದರೆ ಪಿತೃವಾಕ್ಯವನ್ನು ಪರಿ ಪಾಲನೆಮಾಡಿರುವನು. ಇದಕ್ಕೆ ಲೋಕವೆಲ್ಲಾ ಸಾಕ್ಷಿ ಇರುವದು.

ಯಯಾತಿಯ ಮಗನು ತಂದೆಯ ಮಾತಿಗೆ ಇದಿರಾಡದೆ ತನ್ನ ಯವ್ವನವನ್ನು ತಂದೆಗೆ ಧಾರೆಯೆರೆದನು. ಅಣ್ಣನಿರುವಾಗ ಸಿಂಹಾಸನವನ್ನೇರುವುದು ಹೇಗೆಂದು ಹಿಂದುಮುಂದು ನೋಡಬೇಕಾದ್ದಿಲ್ಲ. ತಂದೆಯು ಯಾರಿಗೆ ರಾಜ್ಯವನ್ನು ಕೊಡುತ್ತಾನೋ ಅವರೇ ಅಧಿಕಾರಿಗಳೆಂದು ವೇದದಲ್ಲಿ ಹೇಳಿದೆ. ಧರ್ಮವೇ ಸರ್ವಸ್ವವೆಂದು ಭಾವಿಸುವಂಥವರಿಗೆ ಲೌಕಿಕದೃಷ್ಟಿಗಿಂತಲೂ ವೇದವೇ ಹೆಚ್ಚಿನ ಪ್ರಮಾಣ. ರಾಮನು ಹಿಂದಿರುಗಿ ಬಂದ ಮೇಲೆ ರಾಜ್ಯವನ್ನು ಅವನಿಗೊಪ್ಪಿಸಿ ನೀನು ಎಂದಿನಂತೆ ಪ್ರೇಮದಿಂದ ಅವನನ್ನು ಅನುವರ್ತಿಸಿಕೊಂಡಿರಬಹುದು'' ಎಂದು ವಸಿಷ್ಠರು ಹೇಳುತ್ತಿರಲು ''ಹಾಗೆ ಮಾಡತಕ್ಕದ್ದೇ ಸರಿ; ಹಾಗೆ ಮಾಡತಕ್ಕದ್ದೇ ಸರಿ'' ಎಂದೆಲ್ಲರೂ ಅನುಮೋದಿಸಿದರು.

ಹಾಗೆ ಮಾಡಬೇಕೆಂದರೆ ಭರತನ ಮನಸ್ಸೊಪ್ಪಲೊಲ್ಲದು; ಮಾಡದೆ ಇರಬೇಕೆಂದರೆ ಇಷ್ಟು ಜನರ ಮಾತನ್ನು ಮೀರಬೇಕಾಗುವದು. ಆದ್ದರಿಂದ ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸುವದರ ಮೂಲಕ ಎಲ್ಲರನ್ನೂ ತನ್ನ ದಾರಿಗೆ ತಿರುಗಿಸಿಕೊಳ್ಳಬೇಕೆಂದು ಭರತನು ವಸಿಷ್ಠರ ಮುಂದೆ ತನ್ನ ಹೃದಯವನ್ನು ಬಿಚ್ಚಿ ಹೇಳಿದ್ದೇನೆಂದರೆ ''ಮಹಾಸ್ವಾಮಿ, ಈ ಸಮಯದಲ್ಲಿ ರಾಜ್ಯಭಾರವನ್ನು ವಹಿಸೆಂದು ತಾವು ನನಗೆ ಹೇಳುವದು ನನ್ನ ಹಿತಕ್ಕಾಗಿಯೋ ಅಥವಾ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವದಕ್ಕಾಗಿಯೋ ನನಗೆ ಎರಡೂ ತಿಳಿಯದು. ರಾಮಲಕ್ಷ್ಮಣರು ಹತ್ತಿರದಲ್ಲಿಲ್ಲದಂಥ ನನಗೆ ಈ ಭೂಮಿ ಭೂಮಿಯೇ ಅಲ್ಲ. ವಸ್ತ್ರವಿಲ್ಲದ ಅಲಂಕಾರದಂತೆ ಮತ್ತು ವೈರಾಗ್ಯವಿಲ್ಲದ ಬಾಯಬ್ರಹ್ಮಜ್ಞಾನದಂತೆ ಈ ರಾಜ್ಯದಲ್ಲೇನೂ ಹುರುಳಿಲ್ಲ. ರೋಗದಿಂದ ಪೀಡಿತವಾದ ದೇಹಕ್ಕೆ ಭೋಗವಿಲಾಸಗಳು ಬೇಕಾಗುವದಿಲ್ಲವಲ್ಲವೆ? ಸುಂದರವಾದ ದೇಹವಿದ್ದರೂ ಪ್ರಾಣವಿಲ್ಲದಿದ್ದರೆ ಹೇಗೋ ಹಾಗೆ ಈ ರಾಜ್ಯವು ಈಗ ನನಗೆ ಅಮಂಗಲವಾಗಿ ಕಾಣುವದು. ಆದ್ದರಿಂದ ಈಗ ನಾನು ರಾಮನ ಸನ್ನಿಧಿಗೆ ಹೋಗುವದಕ್ಕೆ ತಾವು ಅಪ್ಪಣೆಯನ್ನು ಕೊಡಬೇಕು. ನನಗೆ ಅದರ ಹೊರತು

ಬೇರೆ ಹಿತವು ತೋರುವದಿಲ್ಲ. ಕೈಕೆಯಿಯ ಮಗನನ್ನು ಅರಸನನ್ನಾಗಿ ಮಾಡಿ ನೀವು ಯಾವ ಸುಖವನ್ನು ಉಣ್ಣುತ್ತೀರಿ? ನನ್ನ ಹೃದಯವು ಕೈಕೆಯಿಗಿಂತ ಕಠಿನವಾದದ್ದೆಂದು ತಿಳಿಯಿರಿ. ನಿಮಗೆ ನಿಜವಾಗಿ ಸುಖವು ಬೇಕಾಗಿದ್ದರೆ ನೀವು ರಾಮನನ್ನೇ ರಾಜನನ್ನಾಗಿ ಮಾಡಿಕೊಳ್ಳಬೇಕು. ನನಗಿನ್ನೇನೂ ತೋರುವದಿಲ್ಲ. ಇದು ಹೇಗಾದರೂ ಇರಲಿ. ಶ್ರೀರಾಮನ ಸಂದರ್ಶನವಾದ ಹೊರತು ನನ್ನ ಮನಸ್ಸಿನ ತಳಮಳವು ನಿಲ್ಲುವದಿಲ್ಲ. ಆದ್ದರಿಂದ ನಾಳೆ ಬೆಳಗಾಗುತ್ತಲೇ ಹೊರಡಬೇಕು. ರಾಮನು ಮಹಾದಯಾಳು. ನನ್ನನ್ನು ಕ್ಷಮಿಸುವನೆಂದು ನನಗೆ ಚೆನ್ನಾಗಿ ನಂಬಿಕೆ ಇದೆ. ರಾಮನು ನನ್ನನ್ನು ಸೇವಕನನ್ನಾಗಿ ಮಾಡಿಕೊಂಡು ಅಯೋಧ್ಯೆಗೆ ಹಿಂದಿರುಗಿ ಬರುವದರ ಮೂಲಕ ನನ್ನ ಪ್ರಾರ್ಥನೆಯನ್ನು ನಡೆಸಿಕೊಡುವಂತೆ ತಾವೆಲ್ಲರೂ ಅಂತಃಕರಣಪೂರ್ವಕವಾಗಿ ಆಶೀರ್ವಾದವನ್ನು ಮಾಡಬೇಕು.'' ಹೀಗೆ ಭರತನು ಹೇಳಿದ್ದನ್ನು ಕೇಳಿ ಎಲ್ಲರ ಚೇತನವೂ ಪುರಿದುಂಬಿಕೊಂಡಿತು. ಎಲ್ಲರೂ ''ಹಾಗೆಯೇ ಆಗಲಿ; ನಾವು ಕೂಡ ಬರುತ್ತೇವೆ'' ಎಂದು ಉದ್ಘೋಷಿಸಿದರು. ಆಗ ವಸಿಷ್ಠರು ''ಭರತ, ಕೈಕೆಯಿಯು ಕೌಟಿಲ್ಯವನ್ನು ನಿನ್ನ ಮೇಲೆ ಆರೋಪಿಸುವಂಥ ಪಾಮರನು ತನ್ನ ಪಿತೃಪಿತಾಮಹರೊಡನೆ ಅನೇಕ ಕಲ್ಪಗಳು ನರಕವಾಸವನ್ನು ಮಾಡಬೇಕಾದೀತು. ನೀನು ಕೈಕೆಯಿಯ ಮಗನಾದರೇನಾಯಿತು? ಸರ್ಪದ ದುರ್ಗುಣವನ್ನು ಅದರ ತಲೆಯಲ್ಲಿರುವ ಮಣಿಯು ಗ್ರಹಣಮಾಡುವದೇ? ಗ್ರಹಣಮಾಡದೆ ಇರುವದಿಷ್ಟೇ ಅಲ್ಲ; ಅದು ವಿಷವನ್ನು ಹರಣಮಾಡುವಂಥದ್ದಾಗಿ ದುಃಖವನ್ನೂ ದಾರಿದ್ರ್ಯವನ್ನೂ ತೊಲಗಿಸುವಂಥದ್ದಾಗಿರುವದು. ಭರತ, ರಾಮನ ಕಡೆಗೆ ಅವಶ್ಯಕವಾಗಿ ಹೋಗೋಣ. ಈ ಯುಕ್ತಿಯನ್ನು ತೆಗೆದಂಥ ನೀನು ದುಃಖವೆಂಬ ಸಮುದ್ರದಲ್ಲಿ ಮುಳುಗಿ ಸಾಯಲಾಗಿದ್ದವರಿಗೆಲ್ಲಾ ಹಡಗಿನಂತೆ ಆಗಿರುವೆ'' ಎಂದು ಭರತನನ್ನು ಶ್ಲಾಘಿಸಿದರು. ಬೆಳಗಾಗುತ್ತಲೆ ಪ್ರಯಾಣವನ್ನು ಬೆಳೆಸತಕ್ಕದ್ದೆಂದು ಗೊತ್ತಾಯಿತು.



## ಭರತನು ರಾಮನ ಕಡೆಗೆ ಹೊರಟದ್ದು

ಆ ರಾತ್ರಿ ಭರತನಿಗೆ ನಿದ್ರೆಯೇ ಹತ್ತಲಿಲ್ಲ. ಬೆಳಕು ಹರಿಯುವ ಹೊತ್ತಿಗೆ ಆನೆ, ಕುದುರೆ, ರಥ ಮೊದಲಾದವುಗಳೆಲ್ಲಾ ಸಿದ್ಧವಾಗಿ ಬಂದು ನಿಂತವು. ವಸಿಷ್ಠರು ತಮ್ಮ ಸಹಧರ್ಮಿಣಿಯಾದ ಅರುಂಧತಿ ಯೊಡನೆ ಅಗ್ನಿಹೋತ್ರವನ್ನೂ ತೆಗೆದುಕೊಂಡು ರಥದ ಮೇಲೆ ಕುಳಿತು ಮುಂದೆ ಹೊರಟರು. ಪೂರ್ವದಲ್ಲಿ ಪುರೋಹಿತರು ಅಷ್ಟು ಮರ್ಯಾದೆಗೆ ತಕ್ಕವರಾಗಿದ್ದರು. ತಪಶ್ಚರ್ಯೆಯ ಪ್ರಭಾವದಿಂದ ಗಾಯತ್ರೀ ಮಂತ್ರವನ್ನು ಕಂಡುಹಿಡಿದ ಮಹರ್ಷಿಯಾದ ವಿಶ್ವಾಮಿತ್ರರಿಗೆ ಬ್ರಹ್ಮರ್ಷಿತ್ವವನ್ನು ಕೊಡುವಷ್ಟು ವಸಿಷ್ಠರ ಜ್ಞಾನಪ್ರಭಾವವು ಉಚ್ಚಸ್ಥಿತಿಯನ್ನು ಪಡೆದಿತ್ತು. ವಸಿಷ್ಠರು ಅಧಿಕಾರಿಕ ಪುರುಷರೆಂದು ಪ್ರಸಿದ್ಧರಾಗಿರುವರು. ಅಧಿಕಾರಿಕ ಪುರುಷರೇನೆಂಬುದನ್ನು ತಿಳಿಯಬೇಕಾದರೆ ಸ್ವಲ್ಪಮಟ್ಟಿಗೆ ವಿಚಾರಮಾಡಬೇಕಾಗಿರುವದು. ನಮಗೆ ಪುಣ್ಯದಿಂದ ಸುಖವೂ ಪಾಪದಿಂದ ದುಃಖವೂ ಆಗುವದೆಂದು ನಾವು ನಂಬಿರುವೆವಷ್ಟೆ. ಎಷ್ಟೋ ಸಣ್ಣಪುಟ್ಟ ಪುಣ್ಯಾಪಾಪಗಳು ಸಣ್ಣಪುಟ್ಟ ಸುಖದುಃಖಗಳನ್ನು ಒಂದೇಜನ್ಮದಲ್ಲಿ ಕೊಟ್ಟು ಮುಗಿಯುವವು. ಬಹು ಹೆಚ್ಚಿನ ಪುಣ್ಯವನ್ನು ಮಾಡಿದರೆ ಅದೊಂದೇ ತನ್ನ ಫಲವನ್ನು ಕೊಟ್ಟು ಮುಗಿಸುವದಕ್ಕೆ ನಾಲ್ಕೈದು ಜನ್ಮಗಳನ್ನು ಕೊಡಬಹುದು. ಬಹು ಹೆಚ್ಚಿನ ಪಾಪವೂ ಹಾಗೆಯೇ. ಈಗ ಪಾಪದ ಮಾತು ಹಾಗಿರಲಿ. ಏಕೆಂದರೆ ಪಾಪದ ವಿಚಾರವೂ ಕೂಡ ಪಾಪಕಲ್ಪನೆಯನ್ನು ತರುವದರಿಂದ ಹಿತವಾದುದಲ್ಲ. ನಾಲ್ಕೈದು ಜನ್ಮಗಳನ್ನೆತ್ತಿ ಸುಖಾನುಭವವನ್ನು ಮಾಡುವಂಥ ಪುಣ್ಯವನ್ನು ಮಾಡಿದವನ ಉದಾಹರಣೆಯನ್ನಿಟ್ಟುಕೊಳ್ಳೋಣ. ಸಾಮಾನ್ಯವಾಗಿ ಪ್ರಾರಬ್ಧವೆಂದರೆ ಒಂದು ಸಲ ಹುಟ್ಟಿ ಸಾಯುವವರೆಗೆ ಇರುವದೆಂದು ನಾವು ತಿಳಿದಿರುವೆವಷ್ಟೆ. ನಾವು ಉದಾಹರಣೆಗಾಗಿ ತೆಗೆದುಕೊಂಡಿರುವವನಿಗೆ ಪ್ರಾರಬ್ಧವೆಂದರೆ ಬರೀ ಒಂದು ಸಲ ಹುಟ್ಟಿ ಸಾಯುವದಲ್ಲ; ನಾಲ್ಕೈದು ಜನ್ಮಗಳೂ ಪ್ರಾರಬ್ಧವೆ. ಪ್ರಾರಬ್ಧವೆಂದರೆ ಫಲವನ್ನು ಕೊಡುವದಕ್ಕೆ ನಿಂತಿರುವ

ಪುಣ್ಯ ಅಥವಾ ಪಾಪ. ನಾವು ಉದಾಹರಣೆಗೆ ತೆಗೆದು ಕೊಂಡಿರು ವವನಿಗೆ ಫಲವನ್ನು ಕೊಡುವದಕ್ಕೆ ನಿಂತಿರುವ ಪುಣ್ಯವು ನಾಲ್ಕೈದು ಜನ್ಮಗಳನ್ನು ಕೊಡುವಂಥದ್ದಾದ್ದರಿಂದ ಅದನ್ನು ಪ್ರಾರಬ್ಧವೆನ್ನ ಬೇಕು. ಈ ಪ್ರಾರಬ್ಧದಂತೆ ಅವನು ಒಂದನೇ ಜನ್ಮವನ್ನೆತ್ತಿರುತ್ತಾನೆ. ಆಗಲೇ ಅವನಿಗೆ ಆತ್ಮಜ್ಞಾನವಾಗಿ ಬಿಡುತ್ತದೆಯೆಂದಿಟ್ಟುಕೊಳ್ಳಿ. ಅಲ್ಲಿಂದಾಚೆಗೆ ಅವನು ಜ್ಞಾನಿಯಾದರೂ ಪ್ರಾರಬ್ಧವಾಗಿ ಉಳಿದಿ ರುವ ಜನ್ಮಗಳನ್ನೆತ್ತಲೇಬೇಕು. ಜ್ಞಾನವು ಪ್ರಾರಬ್ಧವಲ್ಲದ ಉಳಿದ ಕರ್ಮಗಳನ್ನೆಲ್ಲಾ ಸುಟ್ಟುಹಾಕುವದೇ ಹೊರತು ಪ್ರಾರಬ್ಧವನ್ನು ಕಳೆಯುವದಿಲ್ಲ. ಪ್ರಾರಬ್ಧವನ್ನು ಅನುಭವಿಸಿಯೇ ತೀರಬೇಕು. ಚೆನ್ನಾಗಿ ವಿಚಾರಮಾಡಿದರೆ ಜ್ಞಾನಿಗೆ ಪ್ರಾರಬ್ಧವು ಕೂಡ ಇಲ್ಲ. ಹೇಗೆಂದರೆ ಹುಟ್ಟುವದೂ ಸಾವೂ ಇವುಗಳೆಲ್ಲಾ ಈ ತೋರಿಕೆಯ ದೇಹಕ್ಕೆ ಸಂಬಂಧಿಸಿದ್ದೇ ಹೊರತು ಆತ್ಮಕ್ಕೆ ಸಂಬಂಧಿಸಿದ್ದಲ್ಲ ವೆಂದೂ ತಾನು ಆತ್ಮಸ್ವರೂಪನೆಂದೂ ಜ್ಞಾನಿ ತಿಳಿದಿರುವನು. ಆದ್ದರಿಂದ ಪಾರಮಾರ್ಥಿಕ ದೃಷ್ಟಿಯಿಂದ ಅವನು ಹುಟ್ಟುವದೂ ಇಲ್ಲ; ಸಾಯುವದೂ ಇಲ್ಲ. ಆದರೂ ವ್ಯಾವಹಾರಿಕರು ದೇಹ ಧರ್ಮವನ್ನು ಆತ್ಮನ ಮೇಲೆ ಹಾಕಿ ಜ್ಞಾನಿಯೂ ಪ್ರಾರಬ್ಧವನ್ನು ಅನುಭವಿಸಿಯೇ ತೀರಬೇಕೆಂದು ಹೇಳುವರು. ಈ ಮಾತಿಗೆ ಎಷ್ಟು ಬೆಲೆಯನ್ನು ಕೊಡಬಹುದೆಂಬುದನ್ನು ತಿಳಿಸುವದಕ್ಕೆ ಈ ಸ್ಥಳದಲ್ಲಿ ಒಂದು ಕಥೆಯು ಒಪ್ಪುತ್ತದೆ. ಒಂದು ಕಡೆ ಗುಲಗಂಜಿಯ ರಾಶಿ ಬಿದ್ದಿರುತ್ತದೆ. ಕೋತಿಗಳು ದೂರದಿಂದ ಅದನ್ನು ನೋಡಿ ಬೆಂಕಿ ಯೆಂದು ತಿಳಿದು ಕಾಸಿಕೊಳ್ಳುವದಕ್ಕಾಗಿ ಅದರ ಹತ್ತಿರಕ್ಕೆ ಹೋಗಿ ಕೂತುಕೊಳ್ಳುತ್ತವೆ. ಒಂದಕ್ಕೊಂದು ತಾಕಿಕೊಂಡು ಕುಳಿತು ಕೊಂಡದ್ದರಿಂದ ಅವುಗಳಿಗೆ ಶಾಖವು ತೋರುತ್ತದೆ. ತಮ್ಮ ಮೈ ಯಲ್ಲಿಯೇ ಹುಟ್ಟಿದ ಶಾಖವನ್ನು ಅವು ಆ ಬೆಂಕಿಯಿಂದ ಬಂತೆಂದು ತಿಳಿದುಕೊಳ್ಳುತ್ತವೆ. ಅಲ್ಲಿ ಬೆಂಕಿಯೂ ಇಲ್ಲ; ಕೋತಿಗಳು ಅದನ್ನು ಬೆಂಕಿಯೆಂದ ಮಾತ್ರಕ್ಕೆ ಗುಲಗಂಜಿಯ ರಾಶಿ ಸುಟ್ಟು ಹೋಗುವದೂ ಇಲ್ಲ; ಅದರಂತೆ ಜ್ಞಾನಿಗೆ ದೇಹಗಳೇ ಎಂದಿಗೂ ಇಲ್ಲ; ಹುಟ್ಟು

ಪಾಪಗಳೂ ಇಲ್ಲ. ಇವುಗಳೆಲ್ಲಾ ಅವನಿಗೆ ಸ್ವಲ್ಪಮಟ್ಟಿಗೆ ಉಂಟೆಂದು ಇತರರು ಎಷ್ಟು ಆರೋಪಣೆ ಮಾಡಿದರೂ ಅದು ಅವನಿಗೆ ಹತ್ತುವದಿಲ್ಲ. ವ್ಯವಹಾರದೃಷ್ಟಿಗೆ ಕಾಣುವಂಥ ಇಂಥ ಮಹಾಪುಣ್ಯಶಾಲಿಯಾದ ಜ್ಞಾನಿಯ ಜನ್ಮವನ್ನು ಭಗವಂತನು ಲೋಕದ ಸುಸ್ಥಿತಿಯ ಉದ್ಯೋಗಕ್ಕೆ ಉಪಯೋಗ ಮಾಡಿಕೊಳ್ಳುವನು. ಭೌತಿಕಶಾಸ್ತ್ರದಲ್ಲಿ ನಿಪುಣನಾದವನನ್ನು ಕಂಡೊಡನೆ ರಾಜನು ಅವನನ್ನು ತನ್ನ ರಾಜ್ಯದ ಸುಸ್ಥಿತಿಗಾಗಿ ಒಂದು ಅಧಿಕಾರದಲ್ಲಿ ನಿಯೋಗಿಸುವಂತೆ ಶಾರೀರಕಶಾಸ್ತ್ರದಲ್ಲಿ ಎಂದರೆ ಆತ್ಮಜ್ಞಾನ ವಿಚಾರದಲ್ಲಿ ನಿಪುಣನಾದವನನ್ನು ಕಂಡೊಡನೆ ಭಗವಂತನು ಅವನನ್ನು ತನ್ನ ಸೃಷ್ಟಿಯ ಸರ್ವ ಪ್ರಜೆಗಳ ಧರ್ಮದ ಸುಸ್ಥಿತಿಗಾಗಿ ಒಂದು ಅಧಿಕಾರದಲ್ಲಿ ನಿಯೋಗಿಸುವನು. ಹಾಗೆ ನಿಯೋಗವನ್ನು ಪಡೆದವರೇ ಆಧಿಕಾರಿಕ ಪುರುಷರು. ವಸಿಷ್ಠರು ಅಂಥವರಾಗಿದ್ದರು. ಅವರು ಜ್ಞಾನಿಗಳಾಗಿದ್ದು ತಮಗೆ ಕರ್ಮದಿಂದ ಆಗಬೇಕಾದದ್ದೇನೂ ಇಲ್ಲದಿದ್ದರೂ ಕೂಡ ಇತರರಿಗೆ ಉದಾಹರಣೆಯಾಗಿ ಅಗ್ನಿಹೋತ್ರವನ್ನಿಟ್ಟುಕೊಂಡು ವೈದಿಕ ಕರ್ಮಗಳನ್ನು ಯಥಾವಿಧಿಯಾಗಿ ನಡೆಸುತ್ತಿದ್ದರು. ಜ್ಞಾನಿಗಳು ಹೀಗೆ ಮಾಡುವದು ಅವಶ್ಯಕವೇ ಆಗಿರುತ್ತದೆ. ಅವರು ಯಾರ ಆಜ್ಞೆಗೂ ಒಳಗಾಗತಕ್ಕವರಲ್ಲವಾದರೂ ಅವರು ಕರ್ಮವನ್ನು ಬಿಟ್ಟರೆ ಜ್ಞಾನಿಗಳೆನಿಸಿಕೊಂಡವರಿಗೇ ಬೇಡವಾದ ಕರ್ಮ ನಮಗೇಕೆಂದು ಮೂಢರು ಕರ್ಮಭ್ರಷ್ಟರಾಗುವರು. ಕರ್ಮಗಳ ಮೆಟ್ಟಲನ್ನು ಹತ್ತಿ ಮೇಲಕ್ಕೇರಿ ಹೋಗಿರುವ ಜ್ಞಾನಿಗಳ ಅಂತರಂಗದ ಸ್ಥಿತಿ ಮೂಢರಿಗೆ ಹೇಗೆ ತಿಳಿದೀತು? ಓದು ಕಲಿತು ಪಂಡಿತನಾದ ಒಬ್ಬನು ಗ್ರಂಥಾಭ್ಯಾಸವನ್ನು ಮಾಡದೆ ಇರುವದನ್ನು ನೋಡಿ ಅವನನ್ನು ಅಕ್ಷರಾಭ್ಯಾಸವನ್ನು ಮಾಡುವ ಬಾಲಕನು ಅನುಕರಣ ಮಾಡುವದು ಹೇಗೆ ಒಪ್ಪೀತು? ಅಲಸರಾದ ಜನರು ಓದುವವರನ್ನೂ ಮತ್ತು ಕರ್ಮಗಳನ್ನು ಮಾಡುವವರನ್ನೂ ಅನುಕರಣ ಮಾಡುವದಕ್ಕಿಂತಲೂ ಓದದೆ ಇರುವವರನ್ನೂ ಕರ್ಮಗಳನ್ನು ಮಾಡದೆ ಇರುವವರನ್ನೂ ಅನುಕರಣ ಮಾಡುವದೇ ಹೆಚ್ಚು. ಆದರೆ ಇದು ಸರಿಯಲ್ಲ. ಓದು

ಕಲಿತು ಪಂಡಿತರಾದವರೆಲ್ಲರೂ ಓದುತ್ತಲೇ ಇರುವದಿಲ್ಲ. ಆ ಪಂಡಿತರಲ್ಲಿ ಓದನ್ನು ಕಲಿಸುವ ಕೆಲಸವನ್ನು ಕೈಕೊಂಡವರು ಮಾತ್ರ ಮುಂದೆ ತಾವು ಕಲಿಸಬೇಕಾದ ಪಾಠಗಳನ್ನು ಒಮ್ಮೆ ಮನೆಯಲ್ಲಿ ಓದುತ್ತ ಅದರ ವಿಷಯಗಳಲ್ಲಿ ತಕ್ಕ ಟಿಪ್ಪಣಿಗಳನ್ನು ಮಾಡಿಕೊಳ್ಳುವರು. ಅದರಂತೆ ಜ್ಞಾನಿಗಳಾದವರೆಲ್ಲರೂ ಕರ್ಮಗಳನ್ನು ಮಾಡುತ್ತಲೇ ಇರುವದಿಲ್ಲ. ಇತರರನ್ನು ತಿದ್ದುವ ಭಾರವನ್ನು ವಹಿಸಿದಂಥ ಅಧಿಕಾರಿಕಪುರುಷರು ಮಾತ್ರ ಇತರರಂತೆ ಕರ್ಮಗಳನ್ನು ಮಾಡುವರು. ವಸಿಷ್ಠರು ತಮ್ಮ ನಡವಳಿಕೆಯಿಂದ ಇತರರನ್ನು ತಿದ್ದುವವರಾಗಿದ್ದರೂ ಈ ಯೋಗ್ಯತೆಯ ಬಲದಿಂದ ಅವರಿಗೆ ಒಳ್ಳೇ ಮಾನವು ದೊರೆಯುತ್ತಿತ್ತು. ಇದಲ್ಲದೆ ಆಗಿನಕಾಲದಲ್ಲಿ ಧರ್ಮದ ಕಡೆಯ ಲಕ್ಷ್ಯವು ಬಹಳವಾಗಿದ್ದದ್ದರಿಂದ ಎಲ್ಲವನ್ನೂ ಭಗವತ್ಸೇವಾಸ್ವರೂಪದಲ್ಲಿಯೇ ಮಾಡುವ ಪದ್ಧತಿ ಇತ್ತು. ಪೂರ್ವದಲ್ಲಿ ಮನೇಕಟ್ಟುತ್ತಿದ್ದ ಸಂಪ್ರದಾಯವನ್ನು ನೆನೆಸಿಕೊಂಡರೆ ಇದರ ಸ್ವರೂಪವು ತಿಳಿಯುವದು. ಮನೆಯಲ್ಲಿ ದೇವರಿಗೆ ಪ್ರಶಸ್ತವಾದ ಸ್ಥಳ; ಆ ದೇವರ ಷೋಡಶೋಪಚಾರಗಳಿಗೆಂದು ಜನರು ಉಳಿದ ಸ್ಥಳದಲ್ಲಿ ವಾಸಮಾಡಿಕೊಂಡಿರತಕ್ಕದ್ದು—ಹೀಗೆ ಇತ್ತು. ಅದರಂತೆ ಈಗ ಪ್ರಯಾಣವನ್ನು ಮಾಡುವಾಗಲೂ ದೇವರು ಮುಂದೆ; ಉಳಿದವರೆಲ್ಲರೂ ಅದರ ಸೇವಕರಾಗಿ ಹಿಂದೆ. ಈ ನಿಯಮದಂತೆ ಮಹಾಭಗವದ್ಭಕ್ತರಾದ ವಸಿಷ್ಠರು ಮಹಾಪತಿವ್ರತಾ ಶಿರೋಮಣಿಯಾದ ಅರುಂಧತಿಯೊಡನೆ ಪರಮೇಶ್ವರನ ಸ್ಥೂಲಸ್ವರೂಪವಾದ ಅಗ್ನಿಯನ್ನು ತೆಗೆದುಕೊಂಡು ಮುಂದೆ ಹೊರಟರು. ಅವರ ಹಿಂದೆ ರಾಮದರ್ಶನ ಲಾಲಸರಾದ ಎಷ್ಟೋ ಜನ ಬ್ರಾಹ್ಮಣರೂ ಸುವಾಸಿನಿಯರೂ ತಂಡ ತಂಡವಾಗಿ ಬಗೆಬಗೆಯ ವಾಹನಗಳಲ್ಲಿ ಕುಳಿತು ತೆರಳಿದರು. ಭರತನ ಮನಸ್ಸೆಲ್ಲಾ ಶ್ರೀರಾಮನಲ್ಲಿದ್ದದ್ದರಿಂದ ಕಾಡಿನಲ್ಲಿ ಶ್ರೀರಾಮನು ಪಾದಚಾರಿಯಾಗಿರುವಾಗ ತಾನು ತಲೆಯಿಂದಲೇ ನಡೆಯತಕ್ಕ ಈ ಸಮಯದಲ್ಲಿ ಎಷ್ಟು ಮಾತ್ರವೂ ರಥವನ್ನು ಹತ್ತಬಾರದೆಂದು ನಡೆಯುತ್ತಲೇ ಹೊರಟನು. ಅದನ್ನು ನೋಡಿ ತಡೆದುಕೊಳ್ಳಲಾರದೆ ಕೌಸಲ್ಯೆಯು ಮುಂದೆ ಒಂದು

“ಮಗು, ಭರತ, ನಿನ್ನ ಮುಂದೆ ನಮ್ಮ ಜೀವಜ್ಯೋತಿಗಳನ್ನು ನಿವಾಳಿಸಿ ಹಾಕಿದರೂ ಸಾಲದಲ್ಲ! ಇರಲಿ; ರಾಜಪುತ್ರನಾದ ನೀನು ಕಾಲಲ್ಲಿ ನಡೆಯುವದನ್ನು ನಾನು ನೋಡಲಾರೆನು. ನೀನು ನಡೆಯುತ್ತ ಹೋದರೆ ನಾವೆಲ್ಲರೂ ನಡೆಯಲೇಬೇಕಾಗುವದು. ಆದ್ದರಿಂದ ನಮಗಾಗಿ ನೀನು ರಥವನ್ನೇರು” ಎಂದು ಹೇಳಿ ಅವನನ್ನು ರಥದಮೇಲೆ ಕೂಡಿಸಿದಳು. ಮೂವರು ಮಹಾರಾಣಿಯರೂ ಸಕಲ ಪರಿವಾರದವರೂ ಯಥೋಚಿತವಾಹನಗಳನ್ನೇರಿ ಹಿಂದೆ ಹೊರಟರು.

## ಗುಹನ ಸಹಾಯ ದೊರೆತದ್ದು

ಮೊದಲನೆಯ ದಿವಸ ತಮಸಾನದಿಯ ದಡದಲ್ಲಿಯೂ ಎರಡನೆಯ ದಿವಸ ಗೋಮತೀನದೀತೀರದಲ್ಲಿಯೂ ಬಿಡಾರವಾಯಿತು. ರಾಮನನ್ನು ಯಾವಾಗ ಕಂಡೇವೋ ಎಂಬ ತವಕವು ಹೆಚ್ಚಾಗಿದ್ದದ್ದರಿಂದ ಅಲ್ಲಿಯವರಿಗೂ ಒಪ್ಪತ್ತೂಟವನ್ನು ಮಾಡುತ್ತೇನೆಂದು ಕೆಲವರು, ಫಲಾಹಾರದ ಮೇಲಿರುತ್ತೇನೆಂದು ಕೆಲವರು, ಹಾಲೊಂದೇ ಸಾಕೆಂದು ಕೆಲವರು, ನಿಯಮವನ್ನು ಮಾಡಿಕೊಂಡರು. ಹೀಗೆ ನಿಯಮಗಳನ್ನು ಮಾಡಿಕೊಳ್ಳುವದು ಒಳ್ಳೇದು. ಪತಂಜಲಿಮಹರ್ಷಿಗಳು ತಮ್ಮ ಅಷ್ಟಾಂಗಯೋಗಗಳಲ್ಲಿ ನಿಯಮವೆಂಬುದನ್ನು ಎರಡನೇ ಅಂಗವಾಗಿ ಹೇಳಿದ್ದಾರೆ. ಅವರ ಶಾಸ್ತ್ರದ ಪ್ರಕಾರ ಯಮವೆಂಬುದು ಒಂದನೇ ಅಂಗ. ಯಮವೆಂದರೆ ಕೆಟ್ಟಕೆಲಸಗಳಿಂದ ಹಿಮ್ಮೆಟ್ಟುವದು. ಇದು ನಿಯಮಕ್ಕಿಂತ ಅಗತ್ಯವಾದದ್ದೇ ಸರಿ. ಕೆಟ್ಟಕೆಲಸಗಳನ್ನು ಬಿಡದೆ ಎಷ್ಟು ನಿಯಮಗಳನ್ನು ಮಾಡಿದರೇನು? ಎಲುಬನ್ನು ಕೈಲಿ ಹಿಡಿದುಕೊಂಡು ಗಂಗೆಯಲ್ಲಿ ಎಷ್ಟುಸಲ ಮುಳುಗಿದರೆ ತಾನೆ ಮೈಲಿಗೆ ಹೋಗುತ್ತದೆ? ಆದ್ದರಿಂದ ಯಮವೆಂಬುದು ಒಂದನೇ ಸ್ಥಳಕ್ಕೆ ಚೆನ್ನಾಗಿ ಒಪ್ಪುತ್ತದೆ. ಅದರಂತೆ ನಿಯಮವೂ ಎರಡನೇ ಸ್ಥಳಕ್ಕೆ ಚೆನ್ನಾಗಿ ಒಪ್ಪುತ್ತದೆ. ನಿಯಮವೆಂದರೆ ಸ್ಥೂಲವಾದ ಸತ್ಕರ್ಮವನ್ನು ಮಾಡಿಯೇ ತೀರುತ್ತೇನೆಂಬ ನಿರ್ಬಂಧವನ್ನಿಟ್ಟುಕೊಳ್ಳುವದು. ಇದರಿಂದೇನಾಗುವದೆಂದರೆ ದೇಹ ಮೊದಲಾದವುಗಳ ಮೇಲೆ ಅನಾದರವುಂಟಾಗಿ

ತನ್ನ ಉದ್ದಿಷ್ಟವಾದ ವಿಷಯದ ಮೇಲೆ ಆದರವು ಹೆಚ್ಚುತ್ತದೆ. ಉದಾಹರಣೆಗಾಗಿ ನೋಡಿರಿ. ಅಯೋಧ್ಯೆಯ ಜನರು ರಾಮನ ದರ್ಶನವಾಗುವವರೆವಿಗೂ ಎಂದಿನಂತೆ ಆಹಾರವನ್ನು ತೆಗೆದುಕೊಳ್ಳುವದಿಲ್ಲವೆಂದು ತಮಗೆ ತಾವೇ ನಿರ್ಬಂಧ ಮಾಡಿಕೊಂಡರಷ್ಟೆ. ಆಹಾರವನ್ನು ಬಿಟ್ಟದ್ದರಿಂದ ದೇಹವನ್ನು ಅನಾದರ ಮಾಡಿದಂತಾಯಿತು. ಇದರಿಂದ ದೇಹವೇ ನಾನೆಂಬ ಬುದ್ಧಿ ದೂರವಾಗುವದಕ್ಕೆ ದಾರಿಯಾಗುತ್ತದೆ. ಮತ್ತು ತನ್ನ ಈ ನಿಯಮದ ಉದ್ದೇಶವು ರಾಮನದರ್ಶನವೆಂದು ಮನಸ್ಸಿನಲ್ಲಿ ಮೇಲಿಂದ ಮೇಲೆ ಕಲ್ಪನಾತರಂಗವುಂಟಾಗುತ್ತಲೇ ಇರುತ್ತದೆ. ಆದ್ದರಿಂದ ಇದೊಂದು ಬಗೆಯ ತಪಶ್ಚರ್ಯೆ. ಈ ದೇಹದಂಡನರೂಪವಾದ ಕಾಯಿಕತಪಸ್ಸಿನಿಂದ ಕೂಡ ನಮ್ಮ ವಿಷಯದಲ್ಲಿ ಭಗವಂತನ ಮನಸ್ಸು ಕರಗುವದು. ಹೀಗಾಗಿ ನಮ್ಮ ಉದ್ದೇಶವು ಬೇಗ ನೆರವೇರುವದು. ಈ ಮತವನ್ನು ತಿಳಿದು ಅಯೋಧ್ಯೆಯ ಜನರು ಕಾಯಿಕತಪಶ್ಚರ್ಯೆಯನ್ನು ಮಾಡುತ್ತ ಮರುದಿನ ಶೃಂಗಬೇರಪುರದ ಹತ್ತಿರಕ್ಕೆ ಬಂದರು.

ಇಷ್ಟು ಜನರ ಸಂದಣಿಯು ಅಲ್ಲಿಗೆ ಬಂದ ಸುದ್ದಿಯನ್ನು ಕೇಳುತ್ತಲೇ ಆ ಪ್ರಾಂತದ ಅಧಿನಾಯಕನಾದ ಗುಹನಿಗೆ ಎದೆಯೊಡೆಯಿತು. ರಾಮನನ್ನು ಕಾಡಿಗೆ ಕಳುಹಿಸಿದ್ದಷ್ಟೇ ಸಾಲದೆ ಅವನನ್ನು ಸಂಪೂರ್ಣವಾಗಿ ನಿಗ್ರಹಿಸಿಯೇ ಬಿಡಬೇಕೆಂದು ಭರತನು ಬಂದಿರಬಹುದೆಂದು ಅವನ ಮನಸ್ಸಿಗೆ ಹೊಳೆಯಿತು. ಪ್ರಾಪಂಚಿಕರು ಈ ಸಮಯದಲ್ಲಿ ಇನ್ನೇನೂಹಿಸುವದಕ್ಕಾದೀತು? ಗುಹನು ಪ್ರಾಪಂಚಿಕನಾಗಿದ್ದರೂ ರಾಮನಿಗೆ ಪರಮ ಭಕ್ತ. ಪ್ರಾಣಕ್ಕೆ ಅಪಾಯಬಂದರೂ ಕೂಡ ರಾಮನ ವಿರೋಧಿಗಳು ಗಂಗೆಯನ್ನು ದಾಟುವದಕ್ಕೆ ಅವಕಾಶ ಕೊಡಕೂಡದೆಂದು ತನ್ನ ಪರಿವಾರದವರನ್ನೆಲ್ಲಾ ಹುರಿದುಂಬಿಸಿ ಭರತನೊಡನೆ ಯುದ್ಧಕ್ಕೆ ಸಿದ್ಧಗೊಳಿಸಿದನು. 'ಯುದ್ಧದಲ್ಲಿ ಮರಣವೆಂಬುದೇನು ಕಡಿಮೆಯಾದುದೋ? ಅದೂ ಗಂಗಾತಟದಲ್ಲಿ ಮತ್ತು ರಾಮನಿಗಾಗಿ. ಈ ಶರೀರವಾದರೋ ಎಂದಿದ್ದರೂ ಒಂದು ದಿನ ಬಿದ್ದುಹೋಗತಕ್ಕದ್ದು. ಕ್ಷುದ್ರಮನುಷ್ಯನಾದ ನನ್ನ ಬದು

ರಾಳಿಯಾದರೋ ರಾಜಾಧಿರಾಜನಾದ ಭರತ. ಗೆದ್ದರೆ ಕೀರ್ತಿ; ಸತ್ತರೆ ಸದ್ಗತಿ. ರಾಮಕಾರ್ಯಕ್ಕಾಗದ ನನ್ನ ಬಾಳೇತಕ್ಕೆ? ಅದ್ದರಿಂದ ಈ ಸಮಯದಲ್ಲಿ ಸ್ವಾಮಿಕಾರ್ಯಕ್ಕಾಗಿ ನನ್ನ ಪಂಚಪ್ರಾಣಗಳನ್ನೂ ಈಡಾಡಿಬಿಡುವೆನು. ಎಲ್ಲಿ! ರಣವಾದ್ಯಗಳಾಗಲಿ' ಎಂದು ಗುಹನು ಅನ್ನುವಷ್ಟರಲ್ಲಿಯೇ ಎಡಗಡೆಯಲ್ಲಿ ಯಾರೋ ಸೀನಿದರು. ಆಗ ಸೀನಿನ ಶಕುನವನ್ನು ಬಲ್ಲ ಒಬ್ಬ ವೃದ್ಧನು ಯುದ್ಧಕ್ಕೆ ಕಾರಣ ಒದಗಲಾರದೆಂದು ಭವಿಷ್ಯತ್ತನ್ನು ಹೇಳಿದನು. ಸೀನಿಗೂ ಕಾರ್ಯಗಳ ಆಗುಹೋಗುಗಳಿಗೂ ಸ್ಥೂಲವಾದ ಯಾವ ಸಂಬಂಧವೂ ಇಲ್ಲ. ಆದುದರಿಂದ ಭೌತಿಕಶಾಸ್ತ್ರಜ್ಞರು ಸೀನು ಮೊದಲಾದವುಗಳಿಗೆ ಶಕುನದ ದೃಷ್ಟಿಯ ಮಹತ್ವವನ್ನು ಕೊಡುವದಿಲ್ಲ. ಭೌತಿಕಶಾಸ್ತ್ರಜ್ಞರಿಗೂ ಸ್ಥೂಲದೃಷ್ಟಿಗೂ ಗಂಟು. ಅದೇನು ಕಾರಣವೂ ಹೇಳುವದಕ್ಕೆ ಬರುವದಿಲ್ಲ; ಪೂರ್ವಕರು ಹೇಳುವ ಶಕುನಗಳೆಲ್ಲಾ ಈಗಲೂ ಅನುಭವಕ್ಕೆ ಬರುತ್ತಿರುವವು. ನಮ್ಮ ಪೂರ್ವಕರು ಎಷ್ಟು ದೂರದೃಷ್ಟಿಯುಳ್ಳವರೆಂಬುದನ್ನು ತಿಳಿಯುವದಕ್ಕೆ ಹೋಗುವದು ಸೂರ್ಯಮಂಡಲವನ್ನು ನಮ್ಮ ಗೇಣಿನಿಂದ ಅಳೆಯುವದಕ್ಕೆ ಹೋದಂತಾಗುತ್ತದೆ. ಅವರು ಮೂಗು ಹಿಡಿದುಕೊಂಡು ಮೂಲೆಯಲ್ಲಿ ಕುಳಿತುಕೊಳ್ಳುವಂಥ ಧರ್ಮಜಡರೆಂದು ಅವರನ್ನು ಹಂಗಿಸುವ ನಾವು ನಮ್ಮ ಬುದ್ಧಿಶಕ್ತಿಯನ್ನು ಹೊಟ್ಟೆಯೊಡೆಯುವಷ್ಟು ಹಿಗ್ಗಿಸಿದರೂ ಅವರ ದೂರದೃಷ್ಟಿಯ ಮಂಡಲವು ನಮಗೆ ನಿಲುಕುವದಿಲ್ಲ. ನಮ್ಮಿಂದ ಧರ್ಮಜಡರೆನಿಸಿಕೊಳ್ಳುವ ಅವರ ದೃಷ್ಟಿಯು ವ್ಯವಹಾರದಲ್ಲಿ ಎಷ್ಟು ದೂರ ಹೋಗಿರುವದೆಂಬುದನ್ನು ನೋಡಿರಿ. ಅವರು ಸೀನು ಮೊದಲಾದವುಗಳಿಗೂ ಕಾರ್ಯಗಳ ಆಗುಹೋಗುಗಳಿಗೂ ಇರುವ ಸಂಬಂಧವನ್ನು ಕೂಡ ಕಂಡುಹಿಡಿದಿರುವರು. ಮುಂದೆ ಯಾವನಾದರೂ ಭೌತಿಕಶಾಸ್ತ್ರಜ್ಞನು ಇದರ ಛಾಯೆಯನ್ನು ಕಂಡುಹಿಡಿದಾನೋ ಹೇಗೋ, ಈಗಲಂತೂ ಈ ವಿಷಯವು ಭೌತಿಕಶಾಸ್ತ್ರದವರಿಗೆ ಅಡ್ಡಗೋಡೆಯು. ಇದರಿಂದ ತಿಳಿಯುವದೇನೆಂದರೆ ಪ್ರಪಂಚದ ವಿಚಾರಗಳು ತಿಳಿಯಬೇಕಾದರೆ ಪ್ರಪಂಚದಲ್ಲಿ ಆಸಕ್ತನಾಗಲೇಬೇಕಾದ್ದಿಲ್ಲ.

ಪರಮಾರ್ಥದಲ್ಲಿ ನೈಪುಣ್ಯಪಡೆದರೆ ಇಚ್ಛಾಮಾತ್ರದಿಂದ ಪ್ರಪಂಚದಲ್ಲೆಲ್ಲಾ ಗುಡುಗಾಡಿಬಿಡಬಹುದು. ಹೀಗೆ ನಾವು ಹೇಳುವದರಿಂದ ನಮ್ಮ ಪೂರ್ವಿಕರ ಪ್ರತಿಯೊಂದು ಕಲ್ಪನೆಯನ್ನೂ ದ್ರಾವಿಡಪ್ರಾಣಾಯಾಮದಿಂದಲಾದರೂ ಸಾಧ್ಯವಾಗಿ ಮಾಡಿ ತೋರಿಸುವದಕ್ಕೆ ದೀಕ್ಷೆಯನ್ನು ವಹಿಸಿದಹಾಗಾಗುವದೆಂದು ಯಾರೂ ಭಾವಿಸಬಾರದು; ಹಿಂದಿನವರ ಭಾವನೆಯನ್ನಾಗಲೀ ಈಗಿನವರ ಭಾವನೆಯನ್ನಾಗಲೀ ಪರೀಕ್ಷೆಯಿಂದ ನಿರ್ಣಯಿಸತಕ್ಕದ್ದೇ ಯೋಗ್ಯವಾಗಿರುವದು. ಅದರಂತೆಯೇ ಹಿಂದಿನವರ ಯಾವದಾದರೂ ಭಾವನೆಯನ್ನು ಪರೀಕ್ಷೆಯಿಂದ ಸುಳ್ಳೆಂದು ಕಂಡ ಮೇಲೆ ನೀವು ಅದನ್ನು ಕೈಬಿಡಬಹುದು. ಸುಮ್ಮನೆ ಅವರು ಪೂರ್ವಿಕರೆಂಬ ಒಂದೇ ನೆವದ ಮೇಲೆ ಅವರ ಭಾವನೆಗಳನ್ನೆಲ್ಲಾ ಮೂಢಭಾವನೆಗಳೆಂದು ಹೇಳುವ ಸಾಹಸವನ್ನು ಮಾಡುವದು ಸರಿಯಲ್ಲ. ಇರಲಿ. ಯುದ್ಧವಾಗುವದಿಲ್ಲವೆಂದು ಶಕುನವಾದ್ದರಿಂದ ಭರತನು ರಾಮನ ಮೇಲಿನ ಪ್ರೀತಿಯಿಂದಲೇ ಬಂದಿರಬಹುದೋ ಏನೋ ನೋಡಬೇಕೆಂದು ಕಂದಮೂಲಗಳನ್ನು ತೆಗೆದುಕೊಂಡು ಭರತನ ದರ್ಶನಕ್ಕೆಂದು ಬಂದನು. ಇವನೊಬ್ಬ ರಾಮಭಕ್ತನೆಂದು ವಸಿಷ್ಠರು ಸೂಚನೆ ಮಾಡುತ್ತಲೇ ಭರತನು ರಥದಿಂದಿಳಿದು ಬಂಧುಪ್ರೇಮದಿಂದ ಗುಹನೊಡನೆ ಒಂದಾಗಿ ಅವನನ್ನು ಆಲಿಂಗನೆ ಮಾಡಿಕೊಂಡನು. ಆಗ ಗುಹನು ತನ್ನ ಪ್ರವರವನ್ನೆಲ್ಲ ಹೇಳಿಕೊಂಡು ಭರತನ ಪಾದದ ಮೇಲೆ ತಲೆಯನ್ನಿಟ್ಟು ನಮಸ್ಕಾರ ಮಾಡಿದನು. ಅವನನ್ನು ಕಂಡ ಕೂಡಲೇ ಭರತನಿಗೆ ಲಕ್ಷ್ಮಣನನ್ನು ಕಂಡಷ್ಟು ಸಂತೋಷವಾಯಿತು.

ಅವರವರಿಗೆ ಯೋಗಕ್ಷೇಮದ ಮಾತಾದ ಮೇಲೆ ಭರತನ ಸೈನ್ಯವೆಲ್ಲಾ ಜಗತ್ಪಾವನೆಯಾದ ಗಂಗೆಯ ದರ್ಶನಕ್ಕೆ ತೆರಳಿತು. ಅಲ್ಲಿ ಗುಹನು ರಾಮಘಾಟನ್ನು ತೋರಿಸುತ್ತಲೇ ಭರತನಿಗೆ ಸಾಕ್ಷಾದ್ರಾಮಸಂದರ್ಶನವೇ ಆದಂತೆ ಆಯಿತು. ಗಂಗಾಜಲವನ್ನು ನೋಡುತ್ತಲೇ ಅಯೋಧ್ಯೆಯವರಿಗೆಲ್ಲಾ ಬ್ರಹ್ಮಾನಂದವಾಯಿತು. ಎಲ್ಲರೂ ಗಂಗೆಯಲ್ಲಿ ಸ್ನಾನಮಾಡಿ ತಮಗೆ ರಾಮಭಕ್ತಿಯು ದೃಢಮೂಲವಾ

ಗಿರಲೆಂದು ಬೇಡಿಕೊಂಡರು. ಭರತನು ಸ್ನಾನಾಚಮನಗಳನ್ನು ಮಾಡಿ ಮಹಾಪಾತ್ರವಾದ ಗಂಗೆಯನ್ನು ಬಗೆಬಗೆಯಾಗಿ ಬೇಡಿಕೊಂಡು ಇನ್ನೂ ರಾಮಸಂದರ್ಶನವಾಗದೆ ಇದ್ದುದಕ್ಕಾಗಿ ಕಣ್ಣೀರನ್ನು ಸುರಿಸುತ್ತ ಅಲ್ಲಿ ಸೀತಾರಾಮಲಕ್ಷ್ಮಣರು ಇಳಿದುಕೊಂಡಿದ್ದ ಸ್ಥಳವನ್ನಾದರೂ ತೋರಿಸೆಂದು ಗುಹನ ಮುಂದೆ ದೈನ್ಯವನ್ನು ತೋರಿಸಿದನು.

ಭರತನ ಸ್ಥಿತಿಯನ್ನು ನೋಡಿ ಗುಹನಿಗೂ ದುಃಖವು ಉಕ್ಕಿ ಬಂತು. ಹೇಗೋ ತಡೆದುಕೊಂಡು ಅವನು ಭರತನನ್ನು ರಾಮನ ವಿಶ್ರಾಂತಿಸ್ಥಾನವಾದ ಶಿಂಶುಪಾವೃಕ್ಷದ ಬಳಿಗೆ ಕರೆದುಕೊಂಡು ಹೋದನು. ಇನ್ನೂ ದೂರದಲ್ಲಿರುವಾಗಲೇ ಭರತನು ಆ ಪವಿತ್ರ ವೃಕ್ಷಕ್ಕೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಹತ್ತಿರಕ್ಕೆ ಹೋಗುತ್ತಲೇ ರಾಮನಿಗೆ ಆಸನವಾಗಿದ್ದ ಮೃದುವಾದ ಹುಲ್ಲಿನ ಹಾಸಿಗೆಯು ಕಣ್ಣಿಗೆ ಬಿತ್ತು. ಒಡನೆ ಅವನು ಅದಕ್ಕೆ ಮೂರುಸಲ ಪ್ರದಕ್ಷಿಣೆಯನ್ನು ಮಾಡಿ ಅಡ್ಡಬಿದ್ದನು. ಅಲ್ಲಿ ಧೂಳಿನ ಮೇಲೆ ರಾಮನ ಪಾದಗಳು ಮೂಡಿದ್ದುದನ್ನು ಕಂಡು ಆ ಧೂಳಿಯನ್ನು ತನ್ನ ಕಣ್ಣಿಗೊತ್ತಿಕೊಂಡನು. ಅಲ್ಲಿರಡು ಚಿನ್ನದ ರೇಖುಗಳು ಬಿದ್ದಿದ್ದುವು. ಅವು ಸೀತಾದೇವಿಯ ಪಾದಭೂಷಣದ ಮಹಾಪ್ರಸಾದವೆಂದು ತಲೆಯಲ್ಲಿ ಧರಿಸಿದನು. ಯೋಗವೂ ಭೋಗವೂ ಅಂಗೈಯಲ್ಲಿ ನಲಿದಾಡುತ್ತಿರುವಂಥ ಜನಕನೇ ತಂದೆಯಾಗಿಯೂ ಅಮರಾವತಿಯ ರಾಜನಾದ ದೇವೇಂದ್ರನು ಕೂಡ ಆಶ್ರಯವನ್ನು ಬೇಡುತ್ತಿದ್ದಂಥ ದಶರಥಮಹಾರಾಜನೇ ಮಾವನಾಗಿಯೂ ತನ್ನದೊಂದು ಕೃಪಾಕಟಾಕ್ಷದಿಂದ ಬೇಕಾದ ಮಹತ್ಪದವಿಯನ್ನು ಸೂರೆಮಾಡಬಲ್ಲಂಥ ರಾಮಮೂರ್ತಿಯೇ ಪತಿಯಾಗಿಯೂ ಇರುವಂಥ ಈ ನಮ್ಮ ಸೀತಾದೇವಿಗೂ ಈ ಹಾಸಿಗೆಯೂ ಈ ವನವಾಸವೂ ಒದಗಿರುವದನ್ನು ನೋಡಿ ಇನ್ನೂ ನನ್ನ ಎದೆಯೊಡೆದು ಚೂರುಚೂರಾಗದೆ ಇರುವದಲ್ಲ! ತಾಯಿತಂದೆಗಳ ಮುಂದೆ ಚೆಲ್ಲಾಟವಾಡುವ ವಯಸ್ಸಿನ ಲಕ್ಷ್ಮಣನು ಈ ಬಗೆಯ ಕಷ್ಟಕ್ಕೆ ಗುರಿಯಾದದ್ದನ್ನು ನೋಡಿ ನನ್ನ

ಕಣ್ಣುಗಳು ಸಿಡಿದುಹೋಗುವದಿಲ್ಲವಲ್ಲ! ಸೂರ್ಯವಂಶದ—ಅದರಲ್ಲಿಯೂ—ದಶರಥನ ಜೀವನವೃಕ್ಷಪ್ರಾಯನಾಗಿ ತನ್ನ ಪ್ರೇಮಸ್ವಭಾವದಿಂದ ಸರ್ವರ ಮನಸ್ಸನ್ನೂ ಒಲಿಸಿಕೊಂಡಿದ್ದ ಶ್ರೀರಾಮನು ಈ ಬಗೆಯ ದುರ್ದೈವಕ್ಕೆ ಸಿಕ್ಕಿಬಿದ್ದುದನ್ನು ನೋಡಿಯೂ ನನ್ನ ಪ್ರಾಣಗಳಿನ್ನೂ ಈ ದೇಹವನ್ನು ಬಿಟ್ಟು ಹೊರಡಲಿಲ್ಲವಲ್ಲ! ನಾನಿನ್ನೆಂಥಾ ಪಾಪಿಯು! ಎಂದು ಬಗೆಬಗೆಯಾಗಿ ಹಂಬಲಿಸಿಕೊಂಡು ಭರತನು ದುಃಖದಲ್ಲಿ ಮಗ್ನನಾದನು. ಆಗ ಗುಹನು ಸಮಯೋಚಿತವಾದ ಮಾತುಗಳಿಂದ ಸಮಾಧಾನಗೊಳಿಸಿ ಅವನನ್ನು ಬಹು ಪ್ರಯತ್ನದಿಂದ ಹಿಂದಿರುಗಿಸಿ ಬಿಡಾರಕ್ಕೆ ಕರೆದುಕೊಂಡು ಬಂದನು. ಆ ರಾತ್ರಿ ಎಲ್ಲರೂ "ಸೀತಾರಾಮ ಸೀತಾರಾಮ" ಎಂದು ನಾನಾರಾಗಗಳಿಂದ ಅಖಂಡ ಭಜನೆಯನ್ನು ಮಾಡಿ ಭಗವದ್ಭಕ್ತಿಯ ಪ್ರವಾಹವನ್ನು ಆ ಪ್ರಾಂತಕ್ಕೆಲ್ಲಾ ಹರಿಸಿಬಿಟ್ಟರು. ಅವರ ತಾಳಗಳ ಝೇಂಕಾರಬಾಹುಲ್ಯದ ಹೊಡೆತದಿಂದ ಮನಸ್ಸಿನ ವಿಷಯಾಕಾರವೃತ್ತಿ ಎಂಬುದೆಲ್ಲಾ ಛಿದ್ರಛಿದ್ರವಾಗಿ ದಿಕ್ಕೆಟ್ಟು ಹೋಗಿ ರಾಮನಾಮೋಚ್ಚಾರಣೆಯ ಪ್ರಭಾವದಿಂದ ಎಲ್ಲರ ಮನಸ್ಸೂ ರಾಮಾಕಾರವಾದ ಕಾರಣ ಪ್ರತಿಯೊಬ್ಬರೂ ತಮ್ಮ ತಮ್ಮ ಬೇರೆಬೇರೆಯಾದ ಇರುವಿಕೆಯನ್ನು ಮರೆತು ಸೃಷ್ಟಿಯೆಲ್ಲಾ ರಾಮಮಯವಾಗಿರುವದೆಂಬ ಅನುಭವದಲ್ಲಿ ಮುಳುಗಿ ಹೋಗಿದ್ದರು. ನಿಜವಾಗಿ ನಾಮಸ್ಮರಣೆಯ ಪ್ರಭಾವವು ಬಹು ಮಹತ್ತ್ವದ್ದು. ಹೆಸರನ್ನು ಬಿಟ್ಟು ವಸ್ತುವಿಲ್ಲ. ವಸ್ತುವನ್ನು ಬಿಟ್ಟು ಹೆಸರಿಲ್ಲ. ಹೆಸರಿನ ಅರ್ಥವು ಮನಸ್ಸಿನಲ್ಲಿ ಒಂದು ಸಲ ಸ್ಫೂರ್ತಿಯಾದರೆ ಸಾಕು. ನಾಮೋಚ್ಚಾರಣೆಯೆಲ್ಲಾ ಸಾರ್ಥಕವಾಗುವದು. ಆದ್ದರಿಂದ ನಾಮಸ್ಮರಣೆಯಿಂದ ರೂಪಸಾಕ್ಷಾತ್ಕಾರವಾಗುವದು ಅಸಂಭವವಲ್ಲ. ಪರಮಾತ್ಮನ ರೂಪವನ್ನು ಆಕರ್ಷಣೆ ಮಾಡುವ ಮಂತ್ರವಾದ ನಾಮವನ್ನು ನಾವು ಬೇಕಾದಾಗ ಬೇಕಾದಷ್ಟು ಹೊತ್ತು ನಮ್ಮದಾಗಿ ಮಾಡಿಕೊಳ್ಳಬಹುದು. ಅದರಿಂದ ಬೇಕಾದಾಗ ಬೇಕಾದಷ್ಟು ಹೊತ್ತು ಭಗವಂತನು ನಮ್ಮವನಾಗಿಯೇ ತೀರಬೇಕು. ಹೀಗಿರುವದರಿಂದಲೇ ಭಗವಂತನು ಭಕ್ತಪರಾಧೀನ

ನೆನೆಸಿಕೊಂಡಿರುವನು. ಆ ರಾತ್ರಿಯೆಲ್ಲಾ ಹೀಗೆ ಭಗವನ್ಮಯವಾದ ವೃತ್ತಿಯಿಂದ ಜಾಗರಣೆಯಾದ ಮೇಲೆ ಬೆಳಗಾಗುತ್ತಲೇ ಗುಹನ ಸಹಾಯದಿಂದ ಎಲ್ಲರೂ ನದಿಯನ್ನು ದಾಟಿ ಮುಂದಿನ ದಾರಿಯನ್ನು ಹಿಡಿದರು. ಶ್ರೀರಾಮಸಂದರ್ಶನವನ್ನು ಮತ್ತೊಮ್ಮೆ ಮಾಡಬೇಕೆಂಬ ಉತ್ಸುಕತೆಯಿಂದ ಗುಹನೂ ಅವರ ಹಿಂದೆಯೇ ಹೊರಟನು.

## ಭರದ್ವಾಜಾಶ್ರಮದಲ್ಲಿ ನಡೆದ ಸಂಗತಿ.

ಅಲ್ಲಿಂದ ಮುಂದೆ ಪ್ರಯಾಗವು ಬಂತು. ಶುಭ್ರವರ್ಣದ ಗಂಗಾನದಿಯೂ ಶ್ಯಾಮಲವರ್ಣದ ಯಮುನಾನದಿಯೂ ಜೋಡಾಗಿ ಹರಿಯುತ್ತಿದ್ದ ನೀರಿನಲ್ಲಿ ಎಲ್ಲರೂ ಸ್ನಾನಮಾಡಿದ ಮೇಲೆ ಭರತನೂ ಸ್ನಾನವನ್ನು ಮಾಡಿ ಯಥೋಚಿತವಾದ ದಾನಧರ್ಮಗಳಿಂದ ಬ್ರಾಹ್ಮಣರನ್ನು ಸತ್ಕರಿಸಿದನು. ಆಮೇಲೆ ತ್ರಿವೇಣಿಯ ತರಂಗಗಳನ್ನು ನೋಡುತ್ತ ನೋಡುತ್ತ ಭರತನಿಗೆ ರೋಮಾಂಚವುಂಟಾಯಿತು. ಆಗ ಅವನು ಕೈಜೋಡಿಸಿಕೊಂಡು "ತೀರ್ಥರಾಜ, ನೀನು ಸಮಸ್ತವಾದ ಇಷ್ಟಾರ್ಥಗಳನ್ನೂ ಕೊಡಬಲ್ಲವನು. ನಿನ್ನ ಪ್ರಭಾವವು ವೇದದಲ್ಲಿ ಪ್ರಸಿದ್ಧವಾಗಿರುವದು. ಯಾಚನೆ ಮಾಡುವದು ಕ್ಷತ್ರಿಯರಿಗೆ ಧರ್ಮವಲ್ಲವಾದರೂ ನಾನು ನಿನ್ನೆದುರಿಗೆ ಈಗ ಸೆರಗೊಡ್ಡಿ ಬೇಡುತ್ತೇನೆ. ದುಃಖದಿಂದ ಆರ್ತರಾದವರು ಯಾವ ದುಷ್ಕರ್ಮವನ್ನು ತಾನೆ ಮಾಡುವದಿಲ್ಲ? ನನಗೆ ಹಣ ಕಾಸಿನ ಬಯಕೆ ಇಲ್ಲ; ಧರ್ಮದ ಮತ್ತು ಕಾಮದ ಆಸೆಯೂ ಇಲ್ಲ; ಮೋಕ್ಷವೆಂಬುದೂ ನನಗೆ ಬೇಡ; ಪ್ರತಿಯೊಂದು ಜನ್ಮದಲ್ಲಿಯೂ ನನಗೆ ರಾಮಭಕ್ತಿ ಮಾತ್ರ ಸ್ಥಿರವಾಗಿರಲಿ; ಇದೊಂದು ವರವನ್ನು ಕೊಡು; ಇನ್ನೇನೂ ಬೇಡ. ರಾಮನು ನನ್ನನ್ನು ಕುಟಿಲನೆಂದು ತಿಳಿದರೂ ತಿಳಿಯಲಿ. ಜನರು ನನ್ನನ್ನು ಗುರುದ್ರೋಹಿ ಎಂದು ಬಯ್ದರೂ ಬಯ್ಯಲಿ. ನಿನ್ನ ದಯೆದಿಂದ ನನ್ನಲ್ಲಿ ರಾಮಭಕ್ತಿಯು ಮಾತ್ರ ದಿನದಿನವೂ ಅಭಿವೃದ್ಧಿಯನ್ನು ಹೊಂದಲಿ'' ಎಂದು ಬೇಡಿಕೊಂಡು ಮುಂದೆಮುಂದೆ ಹೊರಟು ಭರದ್ವಾಜಾಶ್ರಮಕ್ಕೆ ಬಂದನು.

ಭರದ್ವಾಜರು ಭರತನ ಬರುವಿಕೆಯನ್ನು ಕಾಣುತ್ತಲೇ ಭಗವದ್ಭಕ್ತರ ಆಗಮನವು ಭಾಗ್ಯೋದಯವೆಂದು ಭಾವಿಸಿ ಎದ್ದು ಬಂದು ಆಲಿಂಗನ ಮಾಡಿಕೊಂಡರು. ಪ್ರಾಪಂಚಿಕ ವಿಷಯಗಳ ಮೇಲೆ ಮಮತೆಯನ್ನು ಬಿಟ್ಟು ಭಗವದ್ವಿಚಾರದಲ್ಲಿ ಕಾಲವನ್ನು ಕಳೆಯುವಂಥ ಮಹನೀಯರಿಗೆ ಭಗವದ್ಭಕ್ತರ ಸಂದರ್ಶನವೆಂದರೆ ಸರ್ವಾತಿಶಯವಾಗಿರುವದು. ಭರತನಾದರೋ ಪೂಜ್ಯರಾದ ಮಹರ್ಷಿಗಳು ತನ್ನ ಮೇಲೆ ಅಷ್ಟು ಪ್ರೇಮವನ್ನು ತೋರಿಸಿದರೆಂದು ಅಟ್ಟಕ್ಕೇರಲಿಲ್ಲ; ಮತ್ತಷ್ಟು ವಿನಯದಿಂದ ಅವರಿಗೇ ಅಡ್ಡಬಿದ್ದು ಅವರ ಪೂಜ್ಯತೆಗೆ ತಕ್ಕ ಸತ್ಕಾರವನ್ನು ಮಾಡಿದನು. ಭರತನನ್ನು ಹೇಗೆ ಆದರಿಸಬೇಕೆಂಬುದು ಭರದ್ವಾಜರಿಗೆ ಗೊತ್ತು. ಭರದ್ವಾಜರನ್ನು ಹೇಗೆ ಆದರಿಸಬೇಕೆಂಬುದು ಭರತನಿಗೆ ಗೊತ್ತು. ಪರಸ್ಪರ ಆದರಸತ್ಕಾರಗಳಾದ ಮೇಲೆ ಯೋಗಕ್ಷೇಮದ ಮಾತುಗಳಾದವು. ಭರದ್ವಾಜರು ದಶರಥನ ಸರ್ವೋತ್ಕೃಷ್ಟ ಸೌಜನ್ಯವನ್ನೂ ಶ್ರೀರಾಮನ ಪರಮಪ್ರೇಮಸ್ವಭಾವವನ್ನೂ ಭರತನ ಸದ್ಗುಣವನ್ನೂ ಚೆನ್ನಾಗಿ ಶ್ಲಾಘಿಸಿದರಲ್ಲದೆ ಆತಿಥ್ಯವನ್ನು ಸ್ವೀಕರಿಸಬೇಕೆಂದು ಭರತನಿಗೆ ಅಪ್ಪಣೆಯನ್ನು ಕೊಟ್ಟರು. ಮಹಾತ್ಮರ ಪ್ರಸಾದವು ಉಪೇಕ್ಷಿಸತಕ್ಕದ್ದಲ್ಲವೆಂದು ಭರತನು ಅದಕ್ಕೆ ಒಪ್ಪಿಕೊಂಡನು. ಮಹಾರಾಜಾಧಿರಾಜನಾದ ಭರತನಿಗೆ ತಕ್ಕ ಆತಿಥ್ಯಕ್ಕೆ ಬೇಕಾದ ಉಪಕರಣಗಳಿಗೇನು ಮಾಡಬೇಕೆಂದು ಮನಸ್ಸಿನಲ್ಲೊಂದು ಕಲ್ಪನೆಯ ಅಲೆ ತಲೆ ಎತ್ತುತ್ತಲೇ ಋದ್ಧಿಸಿದ್ಧಿಗಳು ಎದುರಿಗೆ ಬಂದು ನಿಂತು ತಮ್ಮ ಸೇವೆಯನ್ನು ಉಪಯೋಗಮಾಡಿಕೊಳ್ಳಬೇಕೆಂದು ಬೇಡಿಕೊಂಡವು. ಭರದ್ವಾಜರು ಅದಕ್ಕೆ ಓಂ ಎನ್ನುತ್ತಲೇ ಆ ಸಿದ್ಧಿಗಳು ಸರ್ವ ರಾಜೋಪಚಾರಗಳನ್ನೂ ಸಿದ್ಧಮಾಡಿಬಿಟ್ಟವು. ಭರತನಂಥ ಮಹಾರಾಜರು ಕೂಡ ಎಂದೆಂದೂ ಕಂಡರಿಯದಂಥ ಮಹಾರ್ಹವಾದ ಆ ವಸ್ತುಸಮೃದ್ಧಿಯು ಮಹಾ ಮಹಾಜ್ಞಾನಿಗಳಿಗೂ ಕೂಡ ವೈರಾಗ್ಯದ ವಿಸ್ಮೃತಿಯನ್ನುಂಟುಮಾಡುತ್ತಿತ್ತು. ಅಹಿಂಸಾ, ಸತ್ಯ ಮೊದಲಾದ ತಪಶ್ಚರ್ಯೆಗಳನ್ನು ಉತ್ಕಟವಾಗಿ ನಡೆಸಿದರೆ ಅದರ ಫಲವಾಗಿ ಆತ್ಮಸಾಕ್ಷಾತ್ಕಾರಕ್ಕೆ ಪೂರ್ವ

ಭಾವಿಯಾಗಿ ಸರ್ವೋತ್ಕೃಷ್ಟವಾದ ಸುಖವನ್ನು ಅನುಭವಿಸುವದಕ್ಕೆ ಸಾಧನವಾಗುವಂಥ ಈ ಸಿದ್ಧಿಗಳು ದೊರೆಯುವವು. ಇವುಗಳು ಬರುವ ಕಾಲಕ್ಕೆ ಆ ಸಾಧಕನ ಮನಸ್ಸು ಎಷ್ಟೋ ಶುದ್ಧವಾಗಿರುವದಲ್ಲದೆ ಅದೇ ರೀತಿಯಲ್ಲಿ ಅವನು ಇನ್ನೂ ಸ್ವಲ್ಪಕಾಲ ಮಾಡಿದರೆ ಆತ್ಮಸಾಕ್ಷಾತ್ಕಾರವನ್ನು ಪಡೆಯುವ ಸ್ಥಿತಿಯಲ್ಲಿರುವನು. ಒಬ್ಬ ರಾಜನು ತನ್ನ ಸೇವಕನ ಮನೆಗೆ ಬರಬೇಕಾದ ಸಂದರ್ಭದಲ್ಲಿ ತನ್ನ ರಾಜೋಪಚಾರದ ಉಪಕರಣಗಳನ್ನು ಮುಂದಾಗಿ ಕಳುಹಿಸುವದುಂಟು. ಅದರಂತೆ ಪರಮಕಾರುಣಿಕನಾದ ಭಗವಂತನು ಭಕ್ತನ ಹೃದಯದಲ್ಲಿ ಆವಿರ್ಭಾವವಾಗುವದಕ್ಕೆ ಮುಂಚೆ ಈ ಸಿದ್ಧಿಗಳನ್ನು ಕಳುಹಿಸುವದುಂಟು. ಸಾಧಕನು ಈ ಸಿದ್ಧಿಗಳಿಗೆ ಮರುಳಾಗಿ ಇದರಿಂದಲೇ ತಾನು ಕೃತಕೃತ್ಯನಾದೆನೆಂದು ತಿಳಿದು ಇದರಲ್ಲಿಯೇ ಆಸಕ್ತನಾಗಿ ಇದನ್ನೇ ತನ್ನ ಮನಸ್ಸಿನ ತೃಪ್ತಿಗೆ ಸಾಧನವಾಗಿ ಭಾವಿಸಿಬಿಟ್ಟು ತನ್ನ ತಪಶ್ಚರ್ಯೆಯನ್ನು ಮುಂದೆ ಸಾಗಿಸುವದರಲ್ಲಿ ಹಿಂದಾಳಾದರೆ ಅವನಿಗೆ ಆತ್ಮಸಾಕ್ಷಾತ್ಕಾರದ ಯೋಗನೇ ದೂರವಾಗಿ ಬಿಡುತ್ತದೆ. ಈ ಸಿದ್ಧಿಗಳಾದರೋ ಅವನವನ ತಪಶ್ಚರ್ಯೆಯ ಪ್ರಾಬಲ್ಯಕ್ಕೆ ತಕ್ಕಷ್ಟು ಕಾಲ ಇದ್ದು ಆ ಮೇಲೆ ಅಂತರ್ಧಾನವಾಗಿ ಬಿಡುವವು. ಆ ಮೇಲೆ ಅವನಿಗೆ ಸಾಕ್ಷಾತ್ಕಾರವೂ ಇಲ್ಲ, ಸಿದ್ಧಿಯೂ ಇಲ್ಲ; ಅವನು ಎರಡೂ ಕೆಟ್ಟು ಕುರುಡ ದಾಸನಾಗುವದೆ. ಹೀಗೆ ಈ ಸಿದ್ಧಿಗಳು ಆತ್ಮಸಾಕ್ಷಾತ್ಕಾರಕ್ಕೆ ಬಹುಮಟ್ಟಿಗೆ ಪ್ರತಿಬಂಧಕಗಳಾಗುವದುಂಟು. ಧೀರನಾದವನು ಈ ಸಿದ್ಧಿಗಳ ಕಡೆಗೆ ಮನಸ್ಸನ್ನು ಜೋಲುಬಿಡದೆ ಆತ್ಮಸಾಕ್ಷಾತ್ಕಾರವನ್ನು ಪಡೆದೇ ತೀರಬೇಕೆಂದು ತನ್ನ ತಪಶ್ಚರ್ಯೆಯನ್ನು ಎಡೆಬಿಡದೆ ಸಾಗಿಸುತ್ತಾನೆ. ಅವನಿಗೆ ಸಾಕ್ಷಾತ್ಕಾರವೂ ಆಗುವದು; ಸಿದ್ಧಿಗಳೂ ಕೈ ಜೋಡಿಸಿಕೊಂಡು ನಿಂತಿರುವವು; ಮತ್ತು ಈ ಸಿದ್ಧಿಗಳು ಹೋಗುವ ಸಂಭವವೂ ಇಲ್ಲ. ಏಕೆಂದರೆ ಅವನೇ ಭಗವತ್ಸ್ವರೂಪನಾಗಿರುವನು. ಸಿದ್ಧಿಗಳು ಅವನನ್ನು ಬಿಟ್ಟು ಹೇಗೆ ಹೋದಾವು? ಭಗವದ್ಭಕ್ತರ ಸೇವೆಮಾಡುವದೆಂದರೆ ಸಿದ್ಧಿಗಳಿಗೆ ಬಹು ಅಕ್ಕರೆ. ಆ ಭಕ್ತರು

ಸ್ಪಷ್ಟವಾಗಿ ತಮಗೆ ಆಜ್ಞೆಯನ್ನು ಕೊಡದೆ ಹೋದರೂ ಅವರ ಸೇವೆ ಸಿಕ್ಕಿದರೆ ತಾವು ಧನ್ಯರಾಗುವೆವೆಂದು ಸಿದ್ಧಿಗಳು ಅವರ ಮನೋವೃತ್ತಿಯನ್ನು ಕಾದಿದ್ದು ಸಮಯಪರಿತು ತಾವೇ ಬಂದು ಸೇವೆಮಾಡುವವು. ಆದರಂತೆ ಇಲ್ಲಿ ಭರದ್ವಾಜರ ಮನಸ್ಸಿನಲ್ಲಿ ಭರತನ ಆತಿಥ್ಯದ ವಿಚಾರವಾದ ಕಲ್ಪನೆಯುದಯಿಸುತ್ತಲೆ ಸಿದ್ಧಿಗಳು ನಾನು ಮುಂದು ತಾನು ಮುಂದೆಂದು ಬಂದು ಪ್ರಸಕ್ತಕಾರ್ಯವನ್ನು ನೆರವೇರಿಸಿದವು. **"ರಂಗನ ಮುಂದೆ ಸಿಂಗನೆ"** ಎಂಬಂತೆ ದೈವಿಕಕೌಶಲ್ಯದ ಮುಂದೆ ಮನುಷ್ಯಕೌಶಲ್ಯವೇ? ವನವಾಸಿಗಳಾದ ಋಷಿಗಳ ಇಚ್ಛಾಮಾತ್ರದಿಂದ ಈ ಸಿದ್ಧಿಗಳು ಸಿದ್ಧಮಾಡಿದ ರಾಜೋಪಚಾರದ ಮುಂದೆ ಏಕಚ್ಛತ್ರಾಧಿಪತಿಯ ಸರ್ವಪ್ರಯತ್ನಸಾಧ್ಯವಾದ ಸರ್ವಸಂಪತ್ಪ್ರಭಾವವನ್ನು ನಿವಾಳಿಸಿ ಹಾಕುವ ಹಾಗಿತ್ತು. ಇದನ್ನು ನೋಡಿ ಭರತನು ಬೆರಗಾಗಿ ಭೋಗಿಗಳಿಗಿಂತ ಯೋಗಿಗಳ ಪ್ರಭಾವವು ಎಷ್ಟು ಮೇಲಾದುದೆಂಬುದನ್ನು ಮನಗಂಡು ಈಶ್ವರಪ್ರಣಿಧಾನಕ್ಕೆ ಸಮನಾದ್ದಿಲ್ಲವೆಂದು ತನ್ನಲ್ಲಿ ತಾನೇ ನಿಶ್ಚಯಿಸಿಕೊಂಡನು. ಭರದ್ವಾಜರಂಥ ಮಹನೀಯರು ದೇಹಾಭಿಮಾನರಹಿತರಾಗಿ ತಮ್ಮ ಮನಸ್ಸು ಬಂದ ಕಡೆ ಸ್ವಾನಂದಪೂರ್ಣರಾಗಿರುವರು. ಅವರು ಮುಟ್ಟಿದ ನೀರೇ ತೀರ್ಥ. ಅವರು ನಿಂತ ಸ್ಥಳವೇ ಕ್ಷೇತ್ರ. ಎಲ್ಲಿಯಾದರೂ ಇಂಥ ಮಹನೀಯರ ದರ್ಶನವಾದೀತೆಂಬ ನಿರೀಕ್ಷಣೆಯಿಂದಲೇ ಪೂರ್ವಿಕರು ತೀರ್ಥಯಾತ್ರೆಯನ್ನು ಸಾಧನವಾಗಿ ಹೇಳಿರುವರು.

ಭರತನು ಭರದ್ವಾಜಮಹರ್ಷಿಗಳಿಂದ ಆಶೀರ್ವಾದವನ್ನು ಪಡೆದುಕೊಂಡು ಅಲ್ಲಿಂದ ಮುಂದೆ ಚಿತ್ರಕೂಟದ ಕಡೆಗೆ ತನ್ನ ಪರಿವಾರವನ್ನು ಸಾಗಿಸಿದನು. ಈ ಸಮಯದಲ್ಲಿ ಇಂದ್ರನ ಮನಸ್ಸಿನಲ್ಲೊಂದು ಸಂಶಯವು ಬಂತು. ಅದೇನೆಂದರೆ: "ಭರತನನ್ನು ಕಂಡರೆ ರಾಮನಿಗೆ ಸ್ವಭಾವವಾಗಿ ಅತಿ ಪ್ರೀತಿ. ಇದರ ಮೇಲೆ ರಾಮನು ದಾಕ್ಷಿಣ್ಯಸ್ವಭಾವದವನು. ಈಗ ಭರತನೂ ಸರ್ವಮಾತೆಯರೂ ವಸಿಷ್ಠರೂ ಹೋಗಿ ಅವನನ್ನು ನಿರ್ಬಂಧಗೊಳಿಸಿದರೆ ರಾಮನು ಹಿಂದಿರುಗಿಬರುವದಿಲ್ಲವೆಂದು ಹೇಳಲಾರದೆ ಹೋಗುವನು. ಹಾಗೆ ಅವನು ಹಿಂದಿರು

ಗಿದ ಪಕ್ಷದಲ್ಲಿ ರಾವಣನ ವಧೆಯಾಗದೆ ಹೋಗುವದು. ಆ ಕೆಲಸ ವಾಗದೆ ಉಳಿದರೆ ದೇವತೆಗಳ ಕಷ್ಟಕ್ಕೆ ಕೊನೆಯೇ ಇಲ್ಲದಂತಾಗುವದು. ಆದ್ದರಿಂದ ಏನಾದರೂ ಮಾಡಿ ಶ್ರೀರಾಮದರ್ಶನಕ್ಕೆ ಅವಕಾಶವನ್ನು ಕೊಡದೆ ಭರತನನ್ನೇ ಹಿಂತಿರುಗಿಸಿ ಬಿಡಬೇಕು.'' ಹೀಗೆಂದು ಇಂದ್ರ ನಿಗೆ ತೋರಿತು. ಇಲ್ಲಿ ವಾಚಕರು ದೇವತೆಗಳೆಂದರೆ ಯಾರೆಂಬುದನ್ನು ತಿಳಿಯುವದು ಅಗತ್ಯವಾಗಿದೆ. ದೇವತೆಗಳೂ ನಮ್ಮಂತೆ ಜೀವರೆ. ಆದರೆ ಅವರ ದೇಹವೂ ಅವರ ಉಪಕರಣಗಳೂ ನಡವಳಿಕೆಗಳೂ ನಮಗಿಂತ ಎಷ್ಟೋ ಹೆಚ್ಚು ಪ್ರಾಶಸ್ತ್ಯವಾದವುಗಳು. ಮನುಷ್ಯಲೋಕದಲ್ಲಿ ಹೆಚ್ಚಿನ ಪುಣ್ಯವನ್ನು ಮಾಡಿದಂಥವರು ಆ ಪುಣ್ಯದ ಫಲವಾಗಿ ಹೆಚ್ಚಿನ ಸುಖವನ್ನು ಪಡುವದಕ್ಕಾಗಿ ದೇವತೆಗಳಾಗುತ್ತಾರೆ. ಅವರೂ ನಮ್ಮಂಥ ಜೀವರೇ ಆದ್ದರಿಂದ ಅವರಿಗೂ ನಮ್ಮಂತೆಯೇ ಸ್ವಾರ್ಥಬುದ್ಧಿಯೂ ಅಸೂಯೆ ಮೊದಲಾದವುಗಳೂ ಇರುವವು. ಮನುಷ್ಯನಲ್ಲಿ ಯಾವ ನಾದರೂ ಆತ್ಮಜ್ಞಾನವನ್ನು ಪಡೆಯಬೇಕೆಂದು ಯತ್ನವನ್ನು ಮಾಡು ತ್ತಿದ್ದರೆ ದೇವತೆಗಳು ಅವನಿಗೆ ವಿಘ್ನವನ್ನುಂಟುಮಾಡುತ್ತಾರೆಂದು ಹೇಳುತ್ತಾರೆ. ಹಾಗೆ ಅವರು ವಿಘ್ನವನ್ನು ಮಾಡುವದಕ್ಕೆ ಕಾರಣ ವುಂಟು. ಅದೇನೆಂದರೆ ದೇವತೆಗಳ ಪ್ರೀತ್ಯರ್ಥವಾದ ಕರ್ಮಗ ಳನ್ನು ಮಾಡುವದನ್ನು ಬಿಟ್ಟು ಒಬ್ಬ ಮನುಷ್ಯನು ಆತ್ಮಜ್ಞಾನವನ್ನು ಪಡೆದು ಬಿಟ್ಟರೆ ಮನುಷ್ಯನಾಗಿದ್ದ ಅವನು ದೇವತೆಗಳಿಗಿಂತ ಹೆಚ್ಚಿನ ವನಾಗಿ ಬಿಡುತ್ತಾನೆ. ಏಕೆಂದರೆ ದೇವತೆಗಳಿಗನ್ನೂ ಆತ್ಮಜ್ಞಾನ ವಾಗಿರುವದಿಲ್ಲ. ಆದ್ದರಿಂದ ತಮಗಿಂತ ಕಡಮೆಯವನಾಗಿರುವ ಮನುಷ್ಯನು ತಮ್ಮ ಸೇವೆಯಲ್ಲಿ ತೃಪ್ತನಾಗದೆ ತಮಗಿಂತ ಹೆಚ್ಚಿನ ಸ್ಥಿತಿಯನ್ನು ಪಡೆಯುವದಕ್ಕೆ ಪ್ರಯತ್ನಿಸುವದು ಅವರಿಗೆ ಸಹನ ವಾಗುವದಿಲ್ಲ. ಆದ್ದರಿಂದ ಅವನ ಅಭ್ಯುದ್ಧಿಗೆ ಅವರು ಏನಾದರೂ ಅಡಚಣೆಗಳನ್ನು ತಂದೊಡ್ಡಬಹುದು. ಆದರೂ ದೇವತೆಗಳು ವಿಘ್ನ ವನ್ನುಂಟುಮಾಡುವರೆಂದು ಹೆದರಿ ಯಾರೂ ಆತ್ಮಜ್ಞಾನಾರ್ಥವಾದ ಪ್ರಯತ್ನದಿಂದ ಹಿಂದೆಗೆಯಬಾರದು. ಸ್ವಲ್ಪಮಟ್ಟಿಗೆ ಧೈರ್ಯವನ್ನು ತಂದುಕೊಂಡು ಆ ಅಡಚಣೆಗಳನ್ನು ಭೇದಿಸಿಕೊಂಡು ಒಮ್ಮೆ ಮುಂದೆ

ನುಗ್ಗಿದನೆಂದರೆ ಆ ಮೇಲೆ ದೇವತೆಗಳ ಕೈ ಏನೂ ಸಾಗುವದಿಲ್ಲ. ಆ ಮೇಲೆ ಆ ಮನುಷ್ಯನು ಆ ದೇವತೆಗಳಿಗೆ ಆತ್ಮಸ್ವರೂಪನಾಗಿ ಬಿಡು ವನು. ಇರಲಿ, ಒಂದಾನೊಂದು ಕಾಲದಲ್ಲಿ ಲಂಕಾಪಟ್ಟಣದ ಅರಸ ನಾಗಿ ಬಹು ಪ್ರಬಲನಾಗಿದ್ದ ರಾವಣನೆಂಬ ದುಷ್ಟರಾಕ್ಷಸನು ದೇವತೆ ಗಳನ್ನೆಲ್ಲಾ ಬಹಳವಾಗಿ ಪೀಡಿಸುತ್ತಿದ್ದನಂತೆ. ಅವನಿಗೆ ಮನುಷ್ಯ ನಿಂದಲೇ ಮರಣವಾಗಬೇಕಾಗಿತ್ತಂತೆ. ಅವನ ಮೇಲೆ ಕೈಮಾಡು ವದು ಮನುಷ್ಯಮಾತ್ರದವರಿಗೆ ಸಾಧ್ಯವಾಗಿರಲಿಲ್ಲವಾದ್ದರಿಂದ ಮಹಾ ವಿಷ್ಣುವೇ ಮನುಷ್ಯನಾಗಿ ಬಂದು ಅವನನ್ನು ಕೊಲ್ಲಬೇಕೆಂದು ದೇವತೆ ಗಳೆಲ್ಲರೂ ಬೇಡಿಕೊಂಡಿದ್ದರಂತೆ. ಅದರಂತೆ ಮಹಾವಿಷ್ಣು ರಾಮಾವ ತಾರವನ್ನು ಮಾಡಿ ಈಗ ತನ್ನ ಹೆಂಡತಿಯಾದ ಸೀತೆಯನ್ನೂ ತಮ್ಮ ನಾದ ಲಕ್ಷ್ಮಣನನ್ನೂ ಕರೆದುಕೊಂಡು ಆ ಕಡೆಗೆ ಹೊರಟನಂತೆ. ಇದೆಲ್ಲಾ ನಮಗಿಂತಲೂ ಹೆಚ್ಚು ಸತ್ತ್ವಸಂಪನ್ನರಾದ ದೇವತೆಗಳಿಗೆ ಗೊತ್ತಿದ್ದ ಕಾರಣ ಇಂದ್ರನು ಭರತನ ಇಷ್ಟಸಿದ್ಧಿಯಾಗುವದರಿಂದ ತನ್ನ ಇಷ್ಟಸಿದ್ಧಿಯಾಗದೆ ಹೋದೀತೆಂದು ಈ ರೀತಿಯಲ್ಲಿ ಯೋಚನೆ ಮಾಡಿದನು. ಯಾವನಾದರೊಬ್ಬ ರಾಕ್ಷಸನಿಗೆ ಇಂಥ ಯೋಚನೆ ತೋರಿದ್ದ ಪಕ್ಷದಲ್ಲಿ ಅವನು ಹಿಂದುಮುಂದು ನೋಡದೆ ಒಡನೆ ಅದ ರಂತೆ ಮಾಡಿಯೇ ಬಿಡುತ್ತಿದ್ದನು. ಏಕೆಂದರೆ ದೇವತೆಗಳ ಜನ್ಮವು ಪುಣ್ಯದ ಫಲವಾಗಿ ಬಂದಂತೆ ರಾಕ್ಷಸ ಜನ್ಮವು ಪಾಪದ ಫಲವಾಗಿ ಬಂದದ್ದು. ಅವರಿಗೆ ತಮೋಗುಣವು ಹೆಚ್ಚು. ಆದ್ದರಿಂದ ವಿಚಾರ ವಿಲ್ಲದೆ ಮನಸ್ಸಿಗೆ ಬಂದದ್ದನ್ನು ಮಾಡಿಬಿಡುವದು ಅವರ ಸ್ವಭಾವ. ದೇವತೆಗಳು ಸತ್ತ್ವೋತ್ಕರ್ಷವುಳ್ಳವರಾದ್ದರಿಂದ ಅವರಿಗೆ ದೂರಾಲೋ ಚನೆಯುಂಟು. ಆದ್ದರಿಂದಲೇ ಇಂದ್ರನು ತನ್ನ ಮನಸ್ಸಿನಲ್ಲಿ ಬಂದ ಕಲ್ಪನೆಯನ್ನು ತನ್ನ ಗುರುವಾದ ಬೃಹಸ್ಪತ್ಯಾಚಾರ್ಯರಿಗೆ ತಿಳಿಸಿ ದನು. ಸೂರ್ಯವಂಶಕ್ಕೆ ವಸಿಷ್ಠರು ಹೇಗೋ ಹಾಗೆ ದೇವೇಂದ್ರ ಪದವಿಗೆ ಬೃಹಸ್ಪತ್ಯಾಚಾರ್ಯರು ಗುರು. ಸಾಮಾನ್ಯವಾಗಿ ದೇವತೆ ಗಳೆಲ್ಲರೂ ಸತ್ತ್ವೋತ್ಕರ್ಷವುಳ್ಳವರೆ. ಅವರಲ್ಲಿಯೂ ಆ ಪಂಗಡಕ್ಕೆಲ್ಲಾ ಗುರುವಾದ ಬೃಹಸ್ಪತ್ಯಾಚಾರ್ಯರು ಎಷ್ಟೋ ಹೆಚ್ಚಿನ ಸತ್ತ್ವೋತ್ಕರ್ಷ

ವುಳ್ಳವರು. ಅವರು ಈ ಆಲೋಚನೆಯನ್ನು ನಡೆಯಗೊಡಲಿಲ್ಲ. ಮಹಾಭಗವದ್ಭಕ್ತನಾದ ಭರತನಿಗೆ ವಿಘ್ನವನ್ನು ಕಲ್ಪಿಸುವದು ಸಾಕ್ಷಾದ್ಭಗವಂತನಿಗೇ ಅಪಚಾರಮಾಡಿದಂತಾಗುವದೆಂದೂ ಭಗವದ್ಭಕ್ತರಿಗೆ ಭಗವಂತನ ಬೆಂಬಲವಿರುವದರಿಂದ ಅವರಿಗೆ ನಾವು ಮಾಡುವ ಅಡಚಣೆಗಳು ಕಲ್ಲಿನ ಮೇಲೆ ಪ್ರಯೋಗಿಸಿದಂಥ ಕತ್ತಿಯಂತೆ ತಾವೇ ಮುಕ್ಕುಹೋಗುವವೆಂದೂ ರಾಮನು ಸತ್ಯಪ್ರತಿಜ್ಞನಾದ್ದರಿಂದ ದೇವ ಕಾರ್ಯವನ್ನು ಮಾಡಿಯೇ ಮಾಡುವನೆಂದೂ ಭರತನಿಗೆ ವಿಘ್ನವನ್ನು ಮಾಡತಕ್ಕವರು ಶ್ರೀರಾಮನ ಅನುಗ್ರಹಕ್ಕೆ ಪಾತ್ರರಾಗದೆ ನಿಗ್ರಹಕ್ಕೆ ಗುರಿಯಾಗುವರೆಂದೂ ಅವರು ಇಂದ್ರನಿಗೆ ಬುದ್ಧಿಯನ್ನು ಹೇಳಿದರು. ಅವರ ಬುದ್ಧಿವಾದವು ಬಹಳ ವಿಚಾರಪೂರ್ಣವಾಗಿತ್ತು. ನಿಜವಾಗಿ ಭಗವಂತನು ತನಗೆ ಅಡಚಣೆಯನ್ನು ಮಾಡುವವರಿಗಿಂತಲೂ ತನ್ನ ಭಕ್ತರಿಗೆ ಅಡಚಣೆಯನ್ನು ಮಾಡುವವರ ವಿಷಯದಲ್ಲಿ ಅತ್ಯಂತ ಕುಪಿತನಾಗುವನು. ಈ ಮರ್ಮವನ್ನು ತಿಳಿದು ದೇವತೆಗಳೆಲ್ಲರೂ ಭರತನಿಗೆ ಸಿದ್ಧಿಯನ್ನು ಬಯಸಿ ಅವನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು.

## ಚಿತ್ರಕೂಟ ದರ್ಶನ

ಅಲ್ಲಿಂದ ನಡುವೆ ಒಂದು ಕಡೆ ನಿಂತಿದ್ದು ಭರತನು ಯಮುನಾ ತೀರಕ್ಕೆ ಬಂದನು. ಯಮುನಾ ಪ್ರವಾಹವು ಶ್ರೀರಾಮಚಂದ್ರ ಮೂರ್ತಿಯ ದೇಹಚ್ಛಾಯೆಯಂತೆ ನೀಲವರ್ಣವಾಗಿದ್ದದ್ದನ್ನು ನೋಡಿ ಭರತನಿಗೆ ರಾಮನ ನೆನಪು ಬರುತ್ತಲೆ ಅವನ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯಲಾರಂಭಿಸಿತು. ಎಲ್ಲರೂ ಆ ದಿವಸ ಯಮುನಾತಟದಲ್ಲಿದ್ದು ಸ್ನಾನಾದಿಗಳನ್ನು ತೀರಿಸಿ ಹರಕೆಯನ್ನು ಹೊತ್ತು ಮುಂದಕ್ಕೆ ಹೊರಟರು. ಶ್ರೀರಾಮನ ನಿವಾಸಸ್ಥಾನವು ಸಮೀಪವಾಯಿತೆಂದು ತಿಳಿಯುತ್ತಲೇ ಭರತಶತ್ರುಘ್ನರಿಬ್ಬರೂ ಕಾಲುನಡಿಗೆಯಿಂದ ಹೋಗುವದಕ್ಕೆ ಮೊದಲು ಮಾಡಿದರು. ದಾರಿಯಲ್ಲಿದ್ದ ಹಳ್ಳಿಪಳ್ಳಿಗಳ ಜನರು ಇವರಿಬ್ಬರನ್ನೂ ನೋಡಿ ವಯಸ್ಸು,

ರೂಪ, ಲಾವಣ್ಯ, ನಡಿಗೆ ಮೊದಲಾದವುಗಳಲ್ಲೆಲ್ಲಾ ಇವರು ರಾಮ ಲಕ್ಷ್ಮಣರಂತೆಯೇ ಇದ್ದದ್ದನ್ನು ನೋಡಿ ಬೆರಗಾದರು ಮತ್ತು ತಮ್ಮ ಕೆಲಸಗಳನ್ನೆಲ್ಲಾ ಬಿಟ್ಟು ರಾಮಲಕ್ಷ್ಮಣರು ಇಲ್ಲಿಗೆ ಹೇಗೆ ಬಂದ ರೆಂದೂ ಸೀತೆ ಇಲ್ಲದಿರುವದಕ್ಕೆ ಕಾರಣವೇನೆಂದೂ ಈ ವಸ್ತ್ರಾಲಂ ಕಾರಗಳನ್ನೇಕೆ ಧರಿಸಿದರೆಂದೂ ಪರಿವಾರವನ್ನೇಕೆ ಗಂಟುಹಾಕಿಕೊಂಡ ರೆಂದೂ ಮುಖದಲ್ಲಿ ದುಃಖದ ಲಕ್ಷಣವು ಕಾಣುವದಕ್ಕೆ ಕಾರಣವೇ ನಿರಬಹುದೆಂದೂ ಅವರನ್ನೇ ಬಿರಿಬಿರಿ ನಿಟ್ಟಿಸಿ ನೋಡುತ್ತ ನಿಂತರಲ್ಲದೆ ಆ ಮೇಲೆ ವಿಚಾರಿಸಿ ತಿಳಿದು ಭರತನ ಬಂಧುಪ್ರೇಮಕ್ಕೆ ಎಣೆಯೇ ಇಲ್ಲವೆಂದು ಆಶ್ಚರ್ಯಚಕಿತರಾದರು. ಅವರಲ್ಲೊಬ್ಬಳು ಭರತನನ್ನು ಕೈಕೆಯಿಯು ಮಗನೆನ್ನಬಾರದೆಂದಳು. ಕೈಕೆಯಿಯು ಆ ರೀತಿ ನಡೆ ಯದೆ ಹೋಗಿದ್ದರೆ ಹಳ್ಳಿಗಾಡಿನವರಾದ ನಮ್ಮ ಕಣ್ಣುಗಳಿಗೆ ಈ ಹಬ್ಬವೆಲ್ಲಿ ಆಗುತ್ತಿತ್ತೆಂದು ಇನ್ನೊಬ್ಬಳು ಹೇಳಿದಳು. ಜನರೆಲ್ಲರೂ ಹೀಗೆ ಹೇಳಿಕೊಳ್ಳುತ್ತಿರಲು ಭರತನು ದಾರಿಯಲ್ಲಿ ಕಂಡಕಂಡ ತೀರ್ಥ ಗಳಿಗೂ ಆಶ್ರಮಗಳಿಗೂ ದೇವಸ್ಥಾನಗಳಿಗೂ ಅಡ್ಡಬಿದ್ದು ರಾಮಭಕ್ತಿ ಯನ್ನು ದೃಢಮಾಡಬೇಕೆಂದು ಬೇಡಿಕೊಂಡು ಹೋಗುತ್ತ ದಾರಿ ಯಲ್ಲಿ ಬ್ರಹ್ಮಚಾರಿಗಳಾಗಲಿ ಯತಿಗಳಾಗಲಿ ಕಿರಾತರಾಗಲಿ ಯಾರು ಸಿಕ್ಕಿದರೂ ಅವರನ್ನು ಕೇಳಿ ಸೀತಾರಾಮಲಕ್ಷ್ಮಣರ ಯೋಗಕ್ಷೇಮ ವನ್ನು ತಿಳಿದುಕೊಳ್ಳುತ್ತ ಮುಂದೆ ಸಾಗಿ ಪಯಸ್ವಿನೀನದಿಯ ದಡ ದಲ್ಲಿರುವ ಶೈಲಶಿರೋಮಣಿಯಾದ ಚಿತ್ರಕೂಟ ಪರ್ವತವನ್ನು ಕಂಡನು. ಆ ಪರ್ವತದ ಸೌಂದರ್ಯವನ್ನು ನೋಡಿ ಭರತನಿಗತ್ಯಾ ನಂದವಾಗಿದೆ. ವಿವಿಧವಾದ ವೃಕ್ಷರಾಶಿಯಿಂದ ವನವೆಲ್ಲಾ ನೆರಳಾಗಿ ಕಾಲಮೇಘಾಕಾರವಾಗಿದೆ. ಪರ್ವತದ ಮರಿಗಳಂಥ ಆನೆಗಳು ಸ್ವೇಚ್ಛೆಯಿಂದ ನುಗ್ಗುತ್ತ ಅಲ್ಲಲ್ಲಿ ದೊಡ್ಡ ದೊಡ್ಡ ಮರಗಳನ್ನೇ ಉರುಳಿಸುತ್ತಿವೆ. ಒಳ್ಳೇ ಬಲಿತ ಮೇಘಗಳು ದಪ್ಪದಪ್ಪವಾದ ಆಲಿ ಗಲ್ಲುಗಳಿಂದ ಭೂಮಿಯನ್ನು ಮುಚ್ಚುವಂತೆ ವೃಕ್ಷಗಳು ಶುಭ್ರವಾದ ಪುಷ್ಪಗಳಿಂದ ಸಾನುಪ್ರದೇಶವನ್ನೆಲ್ಲಾ ಆಚ್ಛಾದನೆಮಾಡಿವೆ. ಸಮು ದ್ರದಲ್ಲಿ ಮೊಸಳೆಗಳು ವಿಹರಿಸುತ್ತಿರುವಂತೆ ಅರಣ್ಯದಲ್ಲಿ ವನಮೃಗಗಳು

ಸಂಚರಿಸುತ್ತಿವೆ. ಶರತ್ಕಾಲದಲ್ಲಿ ಗಾಳಿಯ ಹೊಡೆತದಿಂದ ಮೇಘಗಳು ಶೀಘ್ರಗತಿಯಿಂದ ಓಡುತ್ತಿರುವಂತೆ ಎಷ್ಟೋ ಮೃಗಗಳು ಜನರನ್ನು ನೋಡಿ ಪಲಾಯನವನ್ನು ಮಾಡುತ್ತಿವೆ. ನಮ್ಮ ವಿಲಕ್ಷಣ ಜನಸಮುದಾಯವನ್ನು ಕಂಡು ಮನೋಹರವಾದ ನವಿಲುಗಳು ಬೆದರಿದಂತೆ ಕಾಣುತ್ತಿವೆ; ಪಕ್ಷಿಗಳೆಲ್ಲಾ ಭಯಗ್ರಸ್ತಗಳಾಗಿ ತಮ್ಮ ತಮ್ಮ ಗೂಡುಗಳೊಳಕ್ಕೆ ಹೋಗಿ ಸೇರಿಕೊಳ್ಳುತ್ತಿವೆ. ಎಲ್ಲೆಲ್ಲಿ ನೋಡಿದರೂ ವಿಶಾಲವಾದ ಕಲ್ಲುಗಳು. ಅವುಗಳಲ್ಲಿಯೂ ಚಿತ್ರ ವಿಚಿತ್ರವರ್ಣ. ಎಲ್ಲೆಲ್ಲಿ ನೋಡಿದರೂ ಉತ್ತಮೋತ್ತಮವಾದ ವನಸ್ಪತಿಗಳು, ಕಂದಮೂಲಗಳು ಮತ್ತು ಸ್ವಚ್ಛವಾದ ಸರೋವರಗಳು. ಸಮೀಪದಲ್ಲಿಯೇ ಮಂದಾಕಿನೀನದಿ, ಅಲ್ಲಿ ಮನೋಹರವಾದ ಮರಳದಿಣ್ಣೆಗಳು. ಅಲ್ಲಲ್ಲಿ ಹಂಸ ಸಾರಸಪಕ್ಷಿಗಳು, ದಡದ ಮೇಲೆಲ್ಲಾ ಫಲಪುಷ್ಪಭರಿತವಾದ ವೃಕ್ಷಗಳು. ಒಂದು ಕಡೆ ವಲ್ಕಲವನ್ನುಟ್ಟಿರುವ ಋಷಿಗಳು ಸ್ನಾನಮಾಡುತ್ತಿದ್ದಾರೆ; ಇನ್ನೊಂದು ಕಡೆ ಮುನಿಗಳು ತೀಕ್ಷ್ಣವಾದ ವ್ರತವನ್ನೂ ಹಿಡಿದು ಎರಡು ಬಾಹುಗಳನ್ನೂ ಮೇಲಕ್ಕೆತ್ತಿ ಕೈಮುಗಿದುಕೊಂಡು ಸೂರ್ಯಾರಾಧನೆಯನ್ನು ಮಾಡುತ್ತಿದ್ದಾರೆ. ಇದನ್ನು ಕಂಡು ಒಡನೆ ಎಲ್ಲರೂ "ಜಯ ಜಾನಕೀಜೀವನ ರಾಮ" ಎಂದು ಉಚ್ಚಸ್ವರದಿಂದ ಉದ್ಘೋಷಿಸಿ ತನ್ಮಯಾಕಾರವುಳ್ಳವರಾಗಿ ತಮ್ಮನ್ನು ತಾವು ಮರೆತಂಥವರಾದರು. ಆಗಿನ ಭರತನ ಸ್ಥಿತಿಯಂತು ವರ್ಣಿಸುವದಕ್ಕೆ ಆದಿಶೇಷನಿಗೂ ಸಾಧ್ಯವಲ್ಲ.

## ಶ್ರೀರಾಮಸಂದರ್ಶನ

ಇತ್ತ ಆ ದಿನ ಬೆಳಗಿನ ಜಾವದಲ್ಲಿ ಸೀತೆಗೊಂದು ಸ್ವಪ್ನವಾಗಿದೆ. ಆ ಸ್ವಪ್ನದಲ್ಲಿ ಶ್ರೀರಾಮನನ್ನಗಲಿರಲಾರದೆ ಭರತನು ಸಪರಿವಾರನಾಗಿ ಬಂದಿರುತ್ತಾನೆ. ಎಲ್ಲರ ಮುಖವೂ ದುಃಖದಿಂದ ಬಾಡಿಹೋಗಿರುತ್ತದೆ. ಮೈದುನನಾದ ಭರತನ ಸ್ಥಿತಿಯನ್ನು ಊಹಿಸಿ ಸೀತಾದೇವಿಯು ಮನಸ್ಸಿನಲ್ಲಿ ಬಹಳ ನೊಂದುಕೊಂಡಂಥವಳಾಗಿ ತನ್ನ ಸ್ವಪ್ನವನ್ನು ರಾಮದೇವರಿಗೆ ತಿಳಿಸಿದಳು. ತನ್ನ ತಮ್ಮನು ತನ್ನ ದೆಸೆ

ಯಿಂದ ದುಃಖಿತನಾಗಿರಬಹುದೆಂಬ ಭಾವನೆಯನ್ನು ತಂದುಕೊಂಡ ಕೂಡಲೆ ಅವನಿಗೆ ಕೂಡ ಕಣ್ಣೀರು ಕೋಡಿ ಇಟ್ಟಿತು. ಈ ದುಃಖಕ್ಕೆ ಲಕ್ಷ್ಮಣನೂ ಭಾಗಿಯಾದನು. ಈ ದುಃಖದಿಂದಾದ ಮನಸ್ಸಿನ ಮಾಲಿನ್ಯವನ್ನು ಕಳೆದುಕೊಳ್ಳುವದಕ್ಕಾಗಿ ಮೂವರೂ ಸ್ನಾನಮಾಡಿ ದರು. ಸ್ನಾನದಿಂದ ಮನಸ್ಸಿನ ಮಲಿನತೆ ಹೇಗೆ ಹೋದೀತೆಂದು ಸಂಶಯವನ್ನು ತಂದುಕೊಳ್ಳಬಾರದು. ದೇಹದೊಳಗೆ ಮನಸ್ಸಿನುತ್ತ ದಷ್ಟೆ. ಆದ್ದರಿಂದ ಮನಸ್ಸಿಗೂ ದೇಹಕ್ಕೂ ಇರುವ ಸಂಬಂಧವು ಬಹು ಸಮೀಪದ್ದಾಯಿತು. ಈ ಕಾರಣದಿಂದ ಒಂದರ ಶುದ್ಧಿಯೂ ಅಶುದ್ಧಿಯೂ ಇನ್ನೊಂದರ ಮೇಲೆ ಹಾದುತೋರುವದು. ಇದರ ಕಾರಣವಿದೇ ಸರಿ ಮತ್ತು ಇಷ್ಟೇ ಸರಿಯೆಂದು ತೋರಿಸುವದಕ್ಕಾಗ ದಿದ್ದರೂ ದೇಹವು ಹೊಲಸಾಗಿರುವಾಗ ಮನಸ್ಸಿನಲ್ಲಿ ಒಳ್ಳೇ ಕಲ್ಪನೆ ಗಳು ಹುಟ್ಟದೆ ಇರುವದೂ ಮನೋರೋಗವೇನಾದರೂ ಇದ್ದರೆ ಅದ ರಿಂದ ಶರೀರವು ಸೊರಗುವದೂ ಎಲ್ಲರ ಅನುಭವದಲ್ಲಿಯೂ ಇದೆ. ಆದ್ದರಿಂದಲೇ ದೇಹವು ಹೊಲಸಾಗಿರುವಾಗ ದೇವತಾರ್ಚನೆ ಮೊದ ಲಾದ ಸಾತ್ತ್ವಿಕ ಪ್ರಧಾನವಾದ ಕರ್ಮಗಳನ್ನು ಮಾಡುವ ಯೋಗ್ಯತೆ ಇರುವದಿಲ್ಲ. ಮನಸ್ಸು ಹೊಲಸಾಗಿರುವಾಗ ಅಂಥವರನ್ನು ಮುಟ್ಟು ವದು ಕೂಡ ಯೋಗ್ಯವಲ್ಲ. ಮನಸ್ಸಿನ ಹೊಲಸುಗಳಲ್ಲೆಲ್ಲಾ ಯಾರಾ ದರೂ ಸಮೀಪಸಂಬಂಧಿಗಳು ಸತ್ತಾಗ ಆಗುವ ಹೊಲಸು ಬಹು ಹೆಚ್ಚಿನದು. ಆ ಸಮಯದಲ್ಲಿ ಆ ದುಃಖವು ಕಡಿಮೆಯಾಗುವವರಿಗೂ ಅವರನ್ನು ಮುಟ್ಟದೆ ಇರುವದು ಈಗಲೂ ವಾಡಿಕೆಯಾಗಿದೆ. ಸತ್ತ ವರು ಕೇವಲ ಸಮೀಪದವರಾಗಿದ್ದರೆ ಆ ದುಃಖವು ಹತ್ತು ದಿನಗಳ ವರೆಗೂ ಇರುವದೆಂದೂ ಸ್ವಲ್ಪ ದೂರದವರಾದರೆ ಮೂರು ದಿನಗಳಿರು ವದೆಂದೂ ಇನ್ನೂ ದೂರದವರಾದರೆ ಒಂದು ದಿನವಿರುವದೆಂದೂ ಶಾಸ್ತ್ರ ಕಾರರು ಗೊತ್ತುಮಾಡಿದ್ದಾರೆ. ಹತ್ತು ದಿನಗಳ ಮತ್ತು ಮೂರು ದಿನಗಳ ಸೂತಕಗಳೆಂಬ ಮಾತಾದರೂ ಸತ್ತವರು ತಮ್ಮ ಸಮೀಪ ಸಂಬಂಧಿಗಳೆಂಬದೊಂದೇ ಅಲ್ಲದೆ ಅವರು ತಮ್ಮ ಸಮೀಪದಲ್ಲಿ ಸತ್ತರೆ ಮಾತ್ರ ಅನ್ವಯಿಸುವದು. ಎಷ್ಟೋ ದಿನಗಳಾಚೆ ಆದ ಮರಣಕ್ಕೆ

ಅಷ್ಟು ದೀರ್ಘಕಾಲವಿರಬೇಕಾದ್ದಿಲ್ಲವೆಂದು ಶಾಸ್ತ್ರಕಾರರು ಒಪ್ಪಿಕೊಂಡಿರುವರು. ಏಕೆಂದರೆ ಹತ್ತಿರದಲ್ಲಿದ್ದಷ್ಟೂ ಒಬ್ಬರಿಗೊಬ್ಬರಿಗೆ ಋಣಾನುಬಂಧವು ಹೆಚ್ಚಾಗಿ ಹತ್ತಿಕೊಂಡಿದ್ದು ಹೆಚ್ಚು ದುಃಖಕ್ಕೆ ಕಾರಣವಾಗುವದು. ಹೆಚ್ಚು ದೂರದಲ್ಲಿದ್ದಷ್ಟೂ ಪರಸ್ಪರಸಂಬಂಧವು ಸಡಿಲವಾಗಿ ದುಃಖದ ಆವೇಶವು ತಗ್ಗುವದು. ಕೆಲವರ ಮರಣ ವಾರ್ತೆಯಿಂದಾದ ದುಃಖವಂತು ಬರೀ ಸ್ನಾನದಿಂದಲೇ ಹೋಗಿ ಬಿಡುವದು. ಸ್ನಾನವನ್ನು ಮಾಡುವದರಿಂದ ದೇಹದ ಹೊಲಸು ಹೋಗುವದೆಂಬುದು ಇತರರಿಗೂ ಕಾಣುವದು. ಮನಸ್ಸು ಶುದ್ಧವಾದದ್ದು ಸ್ನಾನ ಮಾಡಿದವನಿಗೆ ಮಾತ್ರ ತನ್ನ ಅನುಭವದಲ್ಲಿಯೇ ತೋರುವದು. ಅದರಂತೆ ಇಲ್ಲಿ ಸೀತಾರಾಮಲಕ್ಷ್ಮಣರು ತಮ್ಮ ಕಲ್ಪನಾಪ್ರಪಂಚದಲ್ಲಿ ಭರತನು ದುಃಖಿತನಾದ್ದನ್ನು ನೋಡಿದ್ದರಿಂದಾದ ಮನಸ್ಸಿನ ಹೊಲಸನ್ನು ಕಳೆದುಕೊಳ್ಳುವದಕ್ಕಾಗಿ ಸ್ನಾನವನ್ನು ಮಾಡಿ ಆ ಅಮಂಗಲದ ಶಾಂತ್ಯರ್ಥವಾಗಿ ಶಿವಾರ್ಚನೆಯನ್ನು ಮಾಡಿದರು. ರಾಮಚಂದ್ರನು ದೇವಪೂಜೆಯನ್ನು ಮುಗಿಸಿ ಹೊರಗೆ ಬಂದು ಕುಳಿತುಕೊಳ್ಳುವ ಹೊತ್ತಿಗೆ ಸರಿಯಾಗಿ ಉತ್ತರದಿಕ್ಕಿನಲ್ಲಿ ಮುಗಿಲನ್ನೆಲ್ಲಾ ಧೂಳಿಯು ಆವರಿಸಿತ್ತು. ಪಕ್ಕಿಗಳೂ ಮೃಗಗಳೂ ವನವಾಸಿಗಳೂ ಎಲ್ಲರೂ ಆ ಕಡೆಯಿಂದ ಶ್ರೀರಾಮಾಶ್ರಮದ ಕಡೆಗೆ ನುಗ್ಗಿ ಬರುತ್ತಿದ್ದರು. ರಾಮಚಂದ್ರನು ಏದ್ದು ಇದಕ್ಕೆ ಕಾರಣ ವೇನಿರಬಹುದೆಂದು ಅತ್ಯಂತಕುತೂಹಲದಿಂದ ನಿಟ್ಟಿಸಿ ನೋಡುತ್ತಿರಲಾಗಿ ಒಬ್ಬ ಕಿರಾತನು ಓಡಿ ಬಂದು ಭರತನ ಆಗಮನವನ್ನು ಸೂಚನೆ ಮಾಡಿದನು. ಈ ಮಾತು ಕಿವಿಗೆ ಬೀಳುತ್ತಲೇ ಭರತನು ಸೇನಾ ಸಮೇತನಾಗಿ ಬರುತ್ತಿದ್ದಾನೆಂದು ಲಕ್ಷ್ಮಣನ ಮನಸ್ಸಿಗೆ ಹೊಳೆಯಿತು. ಒಡನೆ ಲಕ್ಷ್ಮಣನು ಕ್ರೋಧತಾಮ್ರಾಕ್ಷನಾಗಿ "ಅಣ್ಣಾ, ರಾಮಚಂದ್ರ, ಅಗ್ನಿಕಾರ್ಯಕ್ಕಾಗಿ ಇಟ್ಟುಕೊಂಡಿರುವ ಈ ಅಗ್ನಿಯಿಂದ ಹೊಗೆ ಮೇಲಕ್ಕೆ ಹಾಯದಂತೆ ನೋಡಿಕೊ. ಏಕೆಂದರೆ ಆ ಹೊಗೆಯನ್ನು ನೋಡಿಕೊಂಡು ಶತ್ರುಸೇನೆಯು ಇತ್ತಕಡೆ ನುಗ್ಗುವದರಲ್ಲಿದೆ. ಶೀಘ್ರವಾಗಿ ನೀನು ಜಾನಕಿಯನ್ನು ಒಂದು ಗುಹೆ

ಯೊಳಕ್ಕೆ ಕರೆದುಕೊಂಡು ಹೋಗು. ನಿನ್ನ ಧನುರ್ಬಾಣಗಳು ಸಿದ್ಧವಾಗಿರಲಿ. ನಾವು ಅಯೋಧ್ಯೆಯನ್ನು ಬಿಟ್ಟುಬಂದರೂ ಕೂಡ ಭರತನು ಇಷ್ಟರಿಂದ ತೃಪ್ತನಾಗದೆ ನಮ್ಮನ್ನು ನಿರ್ಮೂಲಮಾಡಿಬಿಡ ಬೇಕೆಂದು ಸೇನಾಸಮೇತನಾಗಿ ಬರುತ್ತಿದ್ದಾನೆ. ಅಣ್ಣಾ, ಈ ರೀತಿ ಯಲ್ಲಿ ದುರ್ಬುದ್ಧಿಯಿಂದ ಬರುತ್ತಿರುವ ಭರತನೂ ಸರ್ವಥದಿಂದಲೂ ವಧ್ಯನೆಂದು ನನ್ನ ಅಭಿಪ್ರಾಯ. ಈ ಭರತನನ್ನು ಕೊಲ್ಲುವದರಿಂದ ನನಗೆ ಎಳ್ಳಷ್ಟೂ ದೋಷವು ತೋರುವದಿಲ್ಲ. ಹೇ ರಾಮಚಂದ್ರ, ಧರ್ಮಭ್ರಷ್ಟನಾದ ಈ ಭರತನನ್ನು ನಾನು ಸಂಹಾರಮಾಡಿಬಿಡು ತ್ತೇನೆ. ಆಮೇಲೆ ನೀನು ಅಖಂಡಭೂಮಂಡಲಕ್ಕೂ ಏಕಚ್ಛತ್ರಾಧಿಪತಿ ಯಾಗು. ಆನೆಯು ಸೊಂಡಿಲಿನಿಂದ ಕೊಂಬೆಯು ಮುರಿದಾಗ ಮರವು ಚೀರುವಂತೆ ರಾಜ್ಯಕಾಮುಕಳಾದ ಕೈಕೆಯಿಯು ಮಗನ ಮರಣ ದಿಂದ ದುಃಖಾರ್ತಳಾದ್ದನ್ನು ನಾನು ಕಣ್ಣಾರೆ ನೋಡುತ್ತೇನೆ. ಇಷ್ಟೇ ಅಲ್ಲ. ಅಧರ್ಮದಿಂದ ರಾಜ್ಯವನ್ನು ಅಪಹಾರಮಾಡುವದಕ್ಕೆ ದೃಢಸಂಕಲ್ಪವನ್ನು ಮಾಡಿದಂಥ ಆ ದುಷ್ಟಳಾದ ಕೈಕೆಯಿಯನ್ನೂ ಅವಳ ಬಂಧುವರ್ಗಸಹಿತವಾಗಿ ಧ್ವಂಸಮಾಡಿಬಿಡುತ್ತೇನೆ. ಈ ಕೆಲ ಸವನ್ನು ನಾನು ಮಾಡದೆ ಹೋದರೆ ಭೂಮಿಯ ಮೇಲೆ ಇಂಥ ಪಾಪಾಚಾರಗಳಿಗೆ ಕೊನೆಯೇ ಇಲ್ಲದೆ ಹೋಗುವದು. ಆದ್ದರಿಂದ ಈ ಚಿತ್ರಕೂಟಪರ್ವತದ ವಾತಾವರಣದಲ್ಲೆಲ್ಲಾ ನನ್ನ ಬಾಣಗಳ ಬಿರಿಮಳೆಯನ್ನು ಸುರಿಸಿ ರಕ್ತಪ್ರವಾಹವನ್ನು ಹರಿಸಿಬಿಡುತ್ತೇನೆ. ನನ್ನ ಬಾಣಕ್ಕೆ ಸಿಕ್ಕಿದ ಆನೆಗಳನ್ನೂ ಕುದುರೆಗಳನ್ನೂ ಮನುಷ್ಯರನ್ನೂ ನಾಯಿನರಿಗಳು ಎಳೆದುಕೊಂಡು ಹೋಗುವಹಾಗೆ ಮಾಡುತ್ತೇನೆ'' ಎಂದು ತುಟಿಗಳನ್ನು ನಡುಗಿಸುತ್ತ ಆಜ್ಞೆಯನ್ನು ನಿರೀಕ್ಷಿಸುತ್ತಿರಲು ಶ್ರೀರಾಮನು ಹುಸಿನಗೆಯನ್ನು ನಗುತ್ತ ಹೇಳುತ್ತಾನೆ. ''ತಮ್ಮ, ಮಹಾಪ್ರಾಜ್ಞನಾದ ಭರತನು ಸಾಕ್ಷಾತ್ತಾಗಿ ಬರುವಾಗ ನಮಗೆ ಧನುರ್ಬಾಣಗಳ ಗೊಡವೆ ಏಕೆ? ಭರತನನ್ನು ಕೊಂದು ಆ ಅಪವಾದ ದಿಂದ ಕಲುಷಿತವಾದ ಭೂಮಿಯೇತಕ್ಕೆ? ನಮ್ಮ ಬಾಂಧವರ ಅಥವಾ ನಮ್ಮ ಮಿತ್ರರ ಎದೆಯ ರಕ್ತವನ್ನು ಬಸಿದು ಪಡೆಯುವಂಥ ಐಶ್ವ

ರ್ಯವು ನನ್ನ ಭಾಗಕ್ಕೆ ವಿಷದ ಹೂರಣದಿಂದ ಕೂಡಿದ ಭಕ್ಷ್ಯವೇ ಸರಿ. ಹೇ ಲಕ್ಷ್ಮಣ, ನಾನು ಧರ್ಮವನ್ನಾಗಲಿ, ಅರ್ಥವನ್ನಾಗಲಿ, ಕಾಮವನ್ನಾಗಲಿ, ಈ ಭೂಮಂಡಲವನ್ನಾಗಲಿ ಬಯಸುವದು ಕೇವಲ ನಿಮಗಾಗಿಯೇ ಹೊರತು ನನಗಲ್ಲ. ನನ್ನ ತಮ್ಮಂದಿರ ಸುಖಕ್ಕೆ ಮತ್ತು ಹಿತಕ್ಕೆ ಅಲ್ಲದೆ ನಾನು ಎಂದೆಂದಿಗೂ ಯಾವ ಇಚ್ಛೆಯನ್ನೂ ಮಾಡಲಾರೆನು. ಅಧರ್ಮದಿಂದ ಇಂದ್ರಪದವಿಯೇ ಬರುವದಾದರೂ ನಾನೊಲ್ಲೆನು. ನಿನ್ನನ್ನೂ ಭರತನನ್ನೂ ಶತ್ರುಘ್ನನನ್ನೂ ಬಿಟ್ಟು ನನಗೆ ಬೇರೆ ಎಲ್ಲಿಯೂ ಸುಖವಿಲ್ಲ. ನಾವು ಅರಣ್ಯಕ್ಕೆ ಬಂದ ಮೇಲೆ ಭರತನು ಅಯೋಧ್ಯೆಗೆ ಬಂದಿರಬಹುದು. ನಾವೆಲ್ಲರೂ ಜಟಾವಲ್ಕಲ ಧಾರಿಗಳಾಗಿ ವನವಾಸಿಗಳಾದದ್ದನ್ನು ಕೇಳಿ ಅವನ ಮನಸ್ಸಿಗೆ ಬಹು ಮಟ್ಟಿಗೆ ದುಃಖವೇ ಆಗಿರಬಹುದು. ಆದ್ದರಿಂದ ಅವನು ಸ್ನೇಹಪರ ವಶನಾಗಿಯೇ ಇಲ್ಲಿಗೆ ಬಂದಿರಬಹುದೇ ಹೊರತು ಬೇರೆ ಇರಲಾರದು. ಭರತನ ಶೀಲಸ್ವಭಾವವನ್ನು ನೆನಸಿಕೊಂಡರೆ ಅವನು ತನ್ನ ತಾಯಿಗೆ ಪರುಷವಾದ ಮಾತುಗಳನ್ನಾಡಿ ತಂದೆಯನ್ನೂ ಪ್ರಸನ್ನನನ್ನಾಗಿ ಮಾಡಿಕೊಂಡು ರಾಜ್ಯವನ್ನು ನನಗೆ ಕೊಡುವದಕ್ಕಾಗಿಯೇ ಇಲ್ಲಿಗೆ ಬಂದಿರುವನೆಂದು ಭಾಸವಾಗುತ್ತದೆ. ಆದ್ದರಿಂದ ನಾವು ಅವನ ವಿಷಯದಲ್ಲಿ ಎಷ್ಟು ಮಾತ್ರವೂ ಅಪ್ರಿಯವನ್ನು ಯೋಚಿಸ ಬಾರದು. ಭರತನು ಹಿಂದೆಯೂ ಎಂದೆಂದೂ ನಮಗೆ ಎರಡು ಬಗೆದವನಲ್ಲ; ಮನಸ್ಸು ನೋಯುವಂಥ ಮಾತನ್ನು ಕೂಡ ಆಡಿದವನಲ್ಲ. ಆದ್ದರಿಂದ ಈಗ ನಾವು ಅವನಿಗೆ ಅಪ್ರಿಯವಾದ ಆಲೋಚನೆಯನ್ನು ಮಾಡಿದರೆ ನಾವೇ ಪ್ರಥಮಾಪರಾಧಿಗಳಾಗುವೆವು.'' ಶ್ರೀರಾಮನ ಈ ಮಾತುಗಳನ್ನು ಕೇಳಿ ಲಕ್ಷ್ಮಣನು ತನ್ನ ಕ್ರೋಧವನ್ನು ತನ್ನಲ್ಲಿಯೇ ನುಂಗಿಕೊಂಡು ಸಮಾಧಾನವನ್ನು ತಂದುಕೊಂಡನು. ಸಾಮಾನ್ಯವಾಗಿ ವಯಸ್ಸು ಚಿಕ್ಕದಾಗಿದ್ದು ಪೌರುಷವಿತ್ತೆಂದರೆ ದೂರಾಲೋಚನೆಯಿರುವದು ಕಠಿಣ. ಆ ದೂರಾಲೋಚನೆಯು ಬಹುಮಟ್ಟಿಗೆ ವಯೋವೃದ್ಧರಿಗೆ ಇರುವದು. ಲೋಕದಲ್ಲಿ ಪೌರುಷದಿಂದಲೇ ಕಾರ್ಯಸಾಧನೆಯಾಗುವದು ನಿಜವಾದರೂ ಅದು

ದೂರಾಲೋಚನೆಯಿಂದ ಕೂಡಿದ್ದರೆ ಮಾತ್ರ ಹಿತಕಾರಿಯಾಗುವದು. ಇಲ್ಲದಿದ್ದರೆ ಆ ಪೌರುಷದ ದುರುಪಯೋಗವಾದಂತೆಯೇ ಸರಿ. ಆದ್ದರಿಂದ ಸಿಟ್ಟುಬಂದ ಕಾಲದಲ್ಲಿ ಅದರ ಸೆಳವಿನೊಳಕ್ಕೆ ನಾವು ಸಿಕ್ಕದೆ ಪ್ರತಿಯೊಬ್ಬನೂ ಅದನ್ನು ತನ್ನ ವಶವರ್ತಿಯಾಗಿ ಮಾಡಿಕೊಳ್ಳಬೇಕು. ಲಕ್ಷ್ಮಣನು ಈ ಪ್ರಕಾರವಾಗಿ ಶಾಂತಿಯನ್ನು ತಂದುಕೊಂಡಮೇಲೆ ರಾಮನಿಗೆ ಸೀತೆಯ ಕನಸು ನೆನಪಾಗಿ ಈಗ ಅದು ಫಲಿಸಿದಂತೆ ತೋರಿತು. ಊರನ್ನು ಬಿಟ್ಟು ಹೊರಡುವಾಗ ಕೂಡ ನೋಡುವದಕ್ಕೆ ಅಗದೆ ಇದ್ದ ಭರತನನ್ನು ನೋಡುವ ಸುಯೋಗವು ಒದಗಿದ ಆನಂದವನ್ನು ಸೂಚಿಸುವದಕ್ಕೆ ರಾಮನ ಕಣ್ಣುಗಳಿಂದ ಆನಂದಾಶ್ರು ಸುರಿಯಿತು. ಇತ್ತ ಭರತನು ಮಂದಾಕಿನಿಯಲ್ಲಿ ಸ್ನಾನವನ್ನು ಮಾಡಿ ತಾಯಿಯರನ್ನೂ ಗುರುಗಳನ್ನೂ ಪರಿವಾರದಲ್ಲಿಯೇ ಬಿಟ್ಟುಕೊಂಡು ಶತ್ರುಘ್ನನನ್ನೂ ಗುಹನನ್ನೂ ಮಾತ್ರ ಸಂಗಡ ಕರೆದುಕೊಂಡು ಕಾಲುನಡಿಗೆಯಿಂದ ಸೀತಾರಾಮಲಕ್ಷ್ಮಣರಿರುವ ಕಡೆಗೆ ಹೋಗುತ್ತ ತನ್ನಲ್ಲಿ ತಾನೇ ಯೋಚನೆ ಮಾಡಿಕೊಂಡದ್ದೇನೆಂದರೆ, "ನಾನು ಈಗ ಹೀಗೆ ಬರುತ್ತೇನೆಂಬುದನ್ನು ಕೇಳಿ ರಾಮನು ತಾನಿರುವ ಸ್ಥಳವನ್ನು ಬಿಟ್ಟು ನಮಗೆ ದೂರನಾಗಿರಲಾರನಲ್ಲವೆ? ನನ್ನನ್ನು ಕೈಕೆಯಿಯ ಮಗನೆಂದು ಭಾವಿಸಿದರೆ ಮಾತ್ರ ಉಪಾಯವಿಲ್ಲ; ಅಥವಾ ನಾನು ಕೈಕೆಯಿಯ ಮಗನಾಗಿ ದುರ್ಗುಣಿಯಾಗಿದ್ದರೂ ಕೂಡ ಪರಮದಯಾನಿಧಿಯಾದ ರಾಮನು ನನ್ನನ್ನು ಕ್ಷಮಿಸಿ ತನ್ನ ಹತ್ತಿರಕ್ಕೆ ಕರೆದುಕೊಂಡೇ ಬಿಡುವನು. ಅವನು ನನ್ನನ್ನು ಹೊರಕ್ಕೆ ಅಟ್ಟಿದರೂ ಅಥವಾ ಒಳಕ್ಕೆ ಕರೆದುಕೊಂಡರೂ ನಾನು ಮಾತ್ರ ಅವನ ಚರಣಾರವಿಂದಕ್ಕೆ ಶರಣು ಹೋಗುವದೇ ಸಿದ್ಧಾಂತ." ಹೀಗೆ ಯೋಚನೆಯನ್ನು ಮಾಡುತ್ತ ಹೋಗುತ್ತಿರುವಾಗ ಒಳ್ಳೇ ಶಕುನಗಳಾದವು. ಇದು ಭರತನಿಗೆ ಎಷ್ಟೋ ಉತ್ತೇಜಕವಾಯಿತು. ಶ್ರೀಸೀತಾರಾಮರ ಆಶ್ರಮ ಪ್ರದೇಶದಲ್ಲಿ ಕಾಲಿಡುತ್ತಲೇ ಹಸಿವೆಯಿಂದ ಕಂಗಾಲಾದವನಿಗೆ ಪಂಚಭಕ್ಷ್ಯಪರಮಾನ್ನಗಳು ದೊರೆತರೆ ಆಗುವಷ್ಟರ ಮಟ್ಟಿಗೆ ಭರತನ ಮನಸ್ಸಿನಲ್ಲಿ ಉಲ್ಲಾಸವಾವಿರ್ಭವಿಸಿತು. ಎಲ್ಲಿ ನೋಡಿದರೂ ವನಲಕ್ಷ್ಮಿ

ಯು ನಿರತಿಶಯವಾದ ತೃಪ್ತಿಯಿಂದ ಹಸನ್ಮುಖಳಾಗುವಂತೆ ಕಂಡು ಬಂದಿತು. ಈ ಸಮಯದಲ್ಲಿ ಅವನಿಗೆ ತೋರಿದ್ದೇನೆಂದರೆ, ಚಿತ್ರ ಕೂಟವೆಂಬದೊಂದು ರಾಜ್ಯ; ಅಲ್ಲಿ ವಿವೇಕನೇ ಧೊರೆ; ವೈರಾಗ್ಯನೇ ಮಂತ್ರಿ; ಸುಂದರವಾದ ಅರಣ್ಯವೇ ಪವಿತ್ರವಾದ ದೇಶ; ಯಮ ನಿಯಮಾದಿಗಳೇ ಅಲ್ಲಿಯ ವೀರಭಟರು; ಚಿತ್ರಕೂಟಪರ್ವತವೇ ರಾಜ ಧಾನಿ; ಶಾಂತಿ ಮತ್ತು ಸುಮತಿ ಎಂಬಿಬ್ಬರು ಅಲ್ಲಿಯ ಸುಂದರಿಯ ರಾದ ಮತ್ತು ಸಾಧ್ವಿಯರಾದ ಪಟ್ಟಮಹಿಷಿಯರು. ಆ ಸರ್ವಾಂಗ ಸಂಪನ್ನನಾದ ರಾಜನು ಶ್ರೀರಾಮಚಂದ್ರನ ಚರಣಾರವಿಂದಗಳ ಆಶ್ರ ಯ ಬಲದಿಂದ ಪ್ರಸನ್ನಚಿತ್ತನಾಗಿ ವಿಹರಿಸುತ್ತಿರುವನು. ಆ ವಿವೇಕ ನೆಂಬ ರಾಜನು ಮೋಹನೆಂಬ ಶತ್ರುರಾಜನನ್ನು ಗೆದ್ದು ಅವನ ಸೇನೆ ಯನ್ನೆಲ್ಲಾ ನುಗ್ಗುನುರಿಮಾಡಿ ನಿಷ್ಕಂಟಕವಾದ ರಾಜ್ಯಭಾರವನ್ನು ಮಾಡುತ್ತಿದ್ದದ್ದರಿಂದ ಅಲ್ಲಿ ಸುಖದ ಮತ್ತು ಸಂಪತ್ತಿನ ಸುಗ್ಗಿಯಾ ಗಿತ್ತು. ಆ ರಾಜ್ಯದಲ್ಲಿ ವನಪ್ರದೇಶ, ಮುನಿಗಳ ಆಶ್ರಮ, ಇವೇ ಊರುಗಳು, ಕೇರಿಗಳು ಮತ್ತು ಹಳ್ಳಿಗಳು. ಬಗೆಬಗೆಯ ಮೃಗ ಪಕ್ಷಿಗಳೇ ಅಲ್ಲಿಯ ಪ್ರಜೆಗಳು. ಅಲ್ಲಿನ ಐಕಮತ್ಯವನ್ನೇನೆಂದು ಹೇಳಬೇಕು! ಹಸಿವುಗೊಂಡ ಸಾರಂಗದ ಮರಿಯು ಹೆಣ್ಣು ಹುಲಿಯ ಮೊಲೆಯನ್ನು ಕುಡಿಯುವದು. ಗಂಡಭೇರುಂಡವು ತನ್ನ ತಾಯಿಯನ್ನು ಅಗಲಿ ಶರಭ ಮೃಗಕ್ಕೆ ಗುಟುಕನ್ನು ಕೊಡು ವದು. ಆನೆಯ ಮರಿಗಳ ಕಾಲುಗಳಿಗೆ ಹೊಕ್ಕ ಮುಳ್ಳುಗಳನ್ನು ಸಿಂಹಗಳು ತಮ್ಮ ಉಗುರುಗಳಿಂದ ಕಿತ್ತೊಗೆಯುವವು. ಹಾವುಗಳು ನವಿಲುಗಳ ರೆಕ್ಕೆಯ ನೆರಳಲ್ಲಿ ಆಡುತ್ತಿರುವವು. ಇವುಗಳನ್ನೆಲ್ಲಾ ನೋಡಿ ಶ್ರೀರಾಮನ ವಾಸಸ್ಥಾನವು ಅತಿಸಮೀಪವಾಯಿತೆಂಬ ಭಾವ ನೆಯಿಂದ ಭರತನ ಮನದಲ್ಲಿ ಉಂಟಾದ ಪ್ರೇಮದ ಆವೇಶವನ್ನು ಅಷ್ಟಿಷ್ಟೆಂದು ಹೇಳುವದಕ್ಕೆ ಆಗುವದಿಲ್ಲ. ಕೃಪಾನಿಧಿಯಾದ ರಘು ವೀರನು ದೇವತೆಗಳ ಮತ್ತು ಸಾಧುಗಳ ಹಿತಾರ್ಥವಾಗಿ ಭರತನ ಹೃದಯವೆಂಬ ಅಗಾಧವಾದ ಸಮುದ್ರವನ್ನು ವಿರಹವೆಂಬ ಮಂದ ರಾಚಲದಿಂದ ಕಡೆದು ಪ್ರೇಮವೆಂಬ ಅಮೃತವನ್ನು ಮೇಲಕ್ಕೆ ತಂದ

ನೆಂದು ಹೇಳುವಂತೆ ಇತ್ತು. ದೂರದಲ್ಲಿದ್ದ ಶ್ರೀರಾಮಾಶ್ರಮವು ಕಣ್ಣಿಗೆ ಬೀಳುತ್ತಲೇ ಸಾಧನಚತುಷ್ಟಯಸಂಪನ್ನನಾದ ಅಧಿಕಾರಿಗೆ ಪರಮಾರ್ಥ ಪ್ರಾಪ್ತಿಯಾದಂತೆ ಭರತನಿಗೆ ಇಷ್ಟಸಿದ್ಧಿಯೇ ಆದಂತಾಯಿತು. ಭರತನು ತನ್ನ ದೃಷ್ಟಿಯನ್ನು ಮುಂದುಮುಂದು ಮಾಡಿ ತನ್ನ ಸರ್ವಶಕ್ತಿಯಿಂದಲೂ ನಿಟ್ಟಿಸಿ ನೋಡಿದನು. ತಲೆಯ ಮೇಲೆ ಜಡೆಯಿಂದ ಮಾಡಿದ ಕಿರೀಟ; ನಾರುಮಡಿಯ ಉಡಿಗೆ; ಕೈಯಲ್ಲಿ ಬಾಣ; ಹೆಗಲ ಮೇಲೆ ಧನುಸ್ಸು—ಈ ರೀತಿಯಲ್ಲಿ ಆಗ ಅವನಿಗೆ ರಾಮಾಜ್ಞೆಯನ್ನು ನಿರೀಕ್ಷಿಸುತ್ತ ಮುಂದೆ ನಿಂತಿರುವ ಲಕ್ಷ್ಮಣನು ಕಂಡನು. ಈ ಸೃಷ್ಟಿಯಲ್ಲಿ ಲಕ್ಷ್ಮಣನ ಜನ್ಮವೊಂದೇ ಸಾರ್ಥಕವೆಂದಂದುಕೊಂಡು ಭರತನು ಇನ್ನೂ ಮುಂದೆ ತನ್ನ ದೃಷ್ಟಿಯನ್ನು ಪ್ರಸರಿಸಿ ನೋಡಲಾಗಿ ಒಂದು ಜಗುಲಿಯ ಮೇಲೆ ಅನೇಕ ಸಾಧುಸಂತರ ನಡುವೆ ನಾರುಬಟ್ಟೆಯನ್ನುಟ್ಟು ಜಟಾಮುಕುಟಶೋಭಿತನಾಗಿ ಧನುರ್ಬಾಣಪಾಣಿಯಾಗಿ ವೀಕ್ಷಣಮಾತ್ರದಿಂದ ಶರಣಾಗತರ ಸಂಸಾರತಾಪವನ್ನು ಹರಣಮಾಡುತ್ತ ಸೀತಾಸಮೇತನಾಗಿದ್ದ ನೀಲಮೇಘಶ್ಯಾಮನಾದ ರಾಮಚಂದ್ರನು ಕಂಗೊಳಿಸಿದನು. ಅವರನ್ನು ನೋಡಿದರೆ ಜ್ಞಾನ ಮತ್ತು ವೈರಾಗ್ಯಮೊದಲಾದವರ ಸಭೆಯಲ್ಲಿ ಭಕ್ತಿಯೂ ಸಚ್ಚಿದಾನಂದ ಸ್ವರೂಪವೂ ದೇಹಧಾರಣೆ ಮಾಡಿದಂತೆ ತೋರುತ್ತಿತ್ತು.

ದೂರದಿಂದಲೇ ಭರತನು ಪ್ರೇಮದಿಂದ ಕಣ್ಣೀರನ್ನು ಸುರಿಸುತ್ತ "ಪತಿತಪಾವನ, ನನ್ನನ್ನು ಕಾಪಾಡು" ಎಂದು ಉದ್ಘೋಷಿಸುತ್ತ ಬರುತ್ತಿದ್ದನು. ಭರತನ ಬರುವಿಕೆಯನ್ನು ಕಂಡರೂ ಶ್ರೀರಾಮಚಂದ್ರನ ಸೇವೆಯನ್ನು ಬಿಟ್ಟು ಭರತನ ಕಡೆಗೆ ಹೋಗುವದು ಲಕ್ಷ್ಮಣನ ಮನಸ್ಸಿಗೆ ಒಗ್ಗಲಿಲ್ಲ. ಭರತನು ರಾಮನ ಕಣ್ಣಿಗೆ ಬೀಳುತ್ತಲೇ ರಾಮನು ತನ್ನ ಧನುರ್ಬಾಣ ಮೊದಲಾದವುಗಳನ್ನೆಲ್ಲಾ ಒಂದುಕಡೆಗೊಗೆದು ತನ್ನ ತಮ್ಮನನ್ನು ಆಲಿಂಗಿಸುವದಕ್ಕಾಗಿ ತಾನೇ ಎದ್ದು ಎದುರಿಗೆ ಹೊರಟನು. ಅವರಿಬ್ಬರೂ ಒಬ್ಬರಿಗೊಬ್ಬರು ಹತ್ತಿರವಾಗುತ್ತ ಇಬ್ಬರೂ ತಮ್ಮನ್ನು ತಾವು ಮರೆತರು. ಇಬ್ಬರ

ಷ್ಟೈಯಲ್ಲಿಯೂ ರೋಮಾಂಚ; ಇಬ್ಬರ ಕಣ್ಣುಗಳಲ್ಲಿಯೂ ಆನಂದಾಶ್ರು; ಇಬ್ಬರೂ ಒಬ್ಬರಲ್ಲೊಬ್ಬರು ಬೆರೆತಂತೆ ಒಬ್ಬರನ್ನೊಬ್ಬರು ಆಲಿಂಗನಮಾಡಿಕೊಂಡರು. ಈ ಸಮಯದಲ್ಲಿ ದೇಹಭಾವವನ್ನು ಕಳೆದುಕೊಂಡವರು ಇವರಿಬ್ಬರೇ ಅಲ್ಲ; ಇದನ್ನು ಕಣ್ಣಾರೆ ಕಂಡವರೆಲ್ಲಾ ಸ್ವಲ್ಪಹೊತ್ತು ತಮ್ಮನ್ನು ತಾವು ಮರೆತು ಆನಂದಸಾಗರದಲ್ಲಿ ಹಾಯಾಗಿ ತೇಲಾಡಿದರು. ಆ ಪ್ರೇಮವೆಂಥದ್ದೆಂಬುದನ್ನು ವರ್ಣಿಸಬೇಕೆಂದು ಮಹಾಮಹಾಕವಿಗಳೇ ತಮ್ಮ ಸರ್ವಸಾಹಸವನ್ನು ವಿನಿಯೋಗಿಸಿದರೂ ಅದರದೊಂದು ನೆರಳಿನ ನೆರಳೂ ಅವರಿಗೆ ಸಿಕ್ಕುವದಿಲ್ಲ. ಇಂಥ ಪ್ರೇಮವನ್ನು ಎಲ್ಲಿಯೂ ಯಾರೂ ಎಂದೂ ಕಂಡಿದ್ದಿಲ್ಲವೆಂದು ದೇವತೆಗಳು ಅವರ ಮೇಲೆ ಹೂವಿನ ಮಳೆಯನ್ನು ಕರೆದರು. ಏಲಕ್ಷಣ ಪ್ರೇಮಾವೇಶದ ಈ ಸಮಾಗಮವಾದ ಮೇಲೆ ಪ್ರತಿಯೊಬ್ಬರೂ ಪ್ರತಿಯೊಬ್ಬರ ಯೋಗಕ್ಷೇಮವನ್ನೂ ವಿಚಾರಿಸಿಕೊಂಡದ್ದಾಯಿತು. ಈ ಪ್ರೇಮಪ್ರವಾಹದ ವೇಗವು ಪೂರ್ವಸ್ಥಿತಿಯ ಕಡೆಗೆ ತಿರುಗಿದಾಗ ಭರತನು ತನ್ನೊಡನೆ ವಸಿಷ್ಠರು ತಾಯಿಯರು ಮೊದಲಾದವರೆಲ್ಲಾ ಬಂದಿರುವ ವಿಷಯವನ್ನು ರಾಮನಿಗೆ ವಿಜ್ಞಾಪನೆಮಾಡಿದನು. ಗುರುಗಳೂ ಹಿರಿಯರೂ ಬಂದಿರುವರೆಂಬ ಮಾತು ಕಿವಿಗೆ ಬಿದ್ದೊಡನೆ ಶ್ರೀರಾಮಚಂದ್ರನು ಮೊದಲು ಅವರನ್ನು ಸತ್ಕರಿಸತಕ್ಕದ್ದೆಂದು ತಾನೇ ಅಲ್ಲಿಂದ ಹೊರಟನು. ವ್ಯವಹಾರದೃಷ್ಟಿಯಿಂದ ನೋಡಿದರೆ ಏಕಚ್ಛತ್ರಾಧಿಪತಿಯಾದ ರಾಮಚಂದ್ರನೆಲ್ಲಿ? ವನವಾಸಿಗಳಾಗಿದ್ದುಕೊಂಡು ಪೌರೋಹಿತ್ಯದಿಂದ ಕಾಲವನ್ನು ಕಳೆಯುವ ವಸಿಷ್ಠರೆಲ್ಲಿ? ಇನ್ನು ಪರಮಾರ್ಥದೃಷ್ಟಿಯಿಂದ ನೋಡಿದರೂ ಸಾಕ್ಷಾದ್ವಿಷ್ಣುವಿನ ಅವತಾರವೇ ಆಗಿರತಕ್ಕ ರಾಮನೆಲ್ಲಿ? ಉಪಾಸನೆಯಿಂದಲೋ ವಿಚಾರದಿಂದಲೋ ಅಭೇದಬುದ್ಧಿಯನ್ನು ಪಡೆದಿರತಕ್ಕ ವಸಿಷ್ಠರೆಲ್ಲಿ? ಹೀಗಿದ್ದರೂ ಕೂಡ ಶ್ರೀರಾಮಚಂದ್ರನು ಗುರುಗಳೆಂದ ಕೂಡಲೆ ತನ್ನ ಹೆಚ್ಚುಗಾರಿಕೆಯ ಕಲ್ಪನೆಯನ್ನು ತಂದುಕೊಳ್ಳದೆ ಇತರರಿಗೆ ಉದಾಹರಣೆಯಾಗಿ ತಾನೇ ಗುರುಗಳನ್ನು ಸತ್ಕಾರಮಾಡುವದಕ್ಕೆ ಹೊರಟದ್ದು ಅಧಿಕಪ್ರಶಂಸನೀಯವಾಗಿದೆ. ಗುರುಗಳ ಜೊತೆಗೆ ಹಿರಿಯರೂ

ಬಂದಿದ್ದದ್ದು ಅವನ ಉತ್ಸಾಹಕ್ಕೆ ಮಾತ್ರವಷ್ಟು ಕಾರಣವಾಯಿತು. ಅದು ಅವನಿಗೆ ಒಪ್ಪತಕ್ಕದ್ದೆ. ದೊಡ್ಡವರೆನಿಸಿಕೊಂಡವರು ಹೀಗೆ ಮಾಡದೆ ಹೋದರೆ ಇತರರೂ ಹಾಗೆ ಮಾಡುವದನ್ನು ಬಿಟ್ಟುಬಿಡುತ್ತಾರೆ. ಹಾಗಾದರೆ ಲೋಕಕ್ಕೆ ಅನಿಷ್ಟವಾಗುವದು. ಯಾರಿಂದ ನಾವು ವಿದ್ಯೆಯನ್ನು ಕಲಿತುಕೊಳ್ಳುತ್ತೇವೋ ಅಥವಾ ಯಾರಿಂದ ನಾವು ಸನ್ಮಾರ್ಗವನ್ನು ಅರಿತುಕೊಳ್ಳುತ್ತೇವೋ ಮತ್ತು ಯಾರಿಂದ ನಾವು ನಿರಾತಂಕವಾಗಿ ಬೆಳೆಯುತ್ತೇವೋ ಅಂಥವರಲ್ಲಿ ನಾವು ಗೌರವವನ್ನಿಟ್ಟ ಹೊರತು ಆ ನಮ್ಮ ವಿದ್ಯೆಯೂ ಸನ್ಮಾರ್ಗಾವಲಂಬನವೂ ಕಾರ್ಯಕಾರಿಯಾಗುವದಿಲ್ಲ. ವಿಚಾರಮಾಡಿದರೆ ವಸಿಷ್ಠರು ವನವಾಸಿಗಳಾಗಿದ್ದುಕೊಂಡು ಪೌರೋಹಿತ್ಯದಿಂದ ಕಾಲವನ್ನು ಕಳೆಯುವವರಾದರೂ ಅವರು ಏಕಚ್ಛತ್ರಾಧಿಪತಿಗಳಿಗಿಂತ ದೊಡ್ಡವರೆ. ಹೇಗೆಂದರೆ ರಾಜನ ಸುಖವು ಇಂದ್ರಿಯಗಳನ್ನೂ ವಿಷಯಗಳನ್ನೂ ಅವಲಂಬಿಸಿಕೊಂಡಿರುವದು; ಎಂದರೆ ರಾಜನು ಸುಖಕ್ಕಾಗಿ ವಿಷಯಗಳ ಮುಂದೆ ಜೋಳಿಗೆಯನ್ನು ಒಡ್ಡಬೇಕು; ರೂಪದ ಸುಖವನ್ನು ತಂದುಕೊಡೆಂದು ಕಣ್ಣನ್ನು ಬೇಡಬೇಕು; ಶ್ರವಣಸುಖವನ್ನು ತೋರಿಸೆಂದು ಕಿವಿಯನ್ನು ಆಶ್ರಯಿಸಬೇಕು. ಸೋಂಕಿನ ಸೌಭಾಗ್ಯವನ್ನು ಉಂಟುಮಾಡೆಂದು ಚರ್ಮದ ಮುಂದೆ ಸೆರಗೊಡ್ಡಬೇಕು; ಸವಿಯ ಸುಖವನ್ನು ಬರಮಾಡೆಂದು ನಾಲಿಗೆಯ ಮುಂದೆ ಬಾಯಿನೀರು ಕರೆಯಬೇಕು; ಸುಗಂಧದ ಸುಖವನ್ನು ಕಾಣಿಸೆಂದು ಮೂಗಿನ ಅನುಗ್ರಹವನ್ನು ಕಾಯಬೇಕು. ಹೀಗೆ ಐದು ಮನೆಯ ಮಧುಕರಿಯನ್ನು ಬೇಡುವದು ಏಕಚ್ಛತ್ರಾಧಿಪತಿಗಾದರೂ ತಪ್ಪಿದ್ದಲ್ಲ. ಜ್ಞಾನಿಯು ಅವುಗಳ ಬೇರೆಬೇರೆ ಇರುವಿಕೆಯನ್ನೇ ಮನಸ್ಸಿಗೆ ತಂದುಕೊಳ್ಳದೆ ಆತ್ಮಾರಾಮನಾಗಿ ನಿರ್ವಿಷಯಕ ಸುಖಸ್ವರೂಪನಾಗಿಯೇ ಇರುವನು. ತಾನೇ ಆನಂದಸಾಗರನಾಗಿರುವದರಿಂದ ಜ್ಞಾನಿಯು ಸುಖವನ್ನು ಹೊರಗೆ ಹುಡುಕಬೇಕಾದ್ದಿಲ್ಲ. ಆದ್ದರಿಂದ ರಾಜರಿಗಿಂತ ಜ್ಞಾನಿಗಳು ದೊಡ್ಡವರು. ಆದರೆ ವಸಿಷ್ಠರು ಉಪಾಸನೆಯಿಂದಲೋ ವಿಚಾರದಿಂದಲೋ ಆ ಪರಮಾತ್ಮಜ್ಞಾನವನ್ನು ಪಡೆದಂಥವರಾದ್ದ

ರಿಂದ ಅವರಿಗಿಂತ ಸಾಕ್ಷಾದ್ವಿಷ್ಣುವಿನ ಅವತಾರವಾದ ರಾಮನು ಹೆಚ್ಚಿನವನೇ ಸರಿ. ಇನ್ನೊಂದು ದೃಷ್ಟಿಯಿಂದ ವಿಚಾರಮಾಡಿದರೆ ಆ ವಿಷ್ಣುವಿಗಿಂತಲೂ ಜ್ಞಾನಿಗಳೇ ದೊಡ್ಡವರು. ಏಕೆಂದರೆ ವಿಷ್ಣುವು ಸರ್ವವ್ಯಾಪಿಯಾಗಿ ಇದ್ದುಕೊಂಡಿರುವನು. ಅವನು ಎಲ್ಲೆಲ್ಲಿಯೂ ಇರುವನು; ಎಲ್ಲರಲ್ಲಿಯೂ ಇರುವನು; ಎಂದೆಂದಿಗೂ ಇರುವನು. ಹೀಗಿದ್ದರೂ ಕೂಡ ಪ್ರಾಪಂಚಿಕರಲ್ಲಿ ಒಬ್ಬನಾದರೂ ಒಂದು ಗಳಿಗೆಯಾದರೂ ಒಂದು ಕಡೆಯಾದರೂ ಪರಮಾತ್ಮಸ್ವರೂಪವನ್ನು ಕಾಣಲರಿಯನು. ಎಲ್ಲೆಲ್ಲಿಯೂ ಬರೀ ಪ್ರಾಪಂಚಿಕರೇ ಆಗಿಬಿಟ್ಟರೆ ದೇವರನ್ನು ಕೇಳುವವರೇ ಇಲ್ಲ. ಅವನು ಇದ್ದರೂ ಇಲ್ಲದಂತಾಗುವನು. ಅಲ್ಲಲ್ಲಿ ಒಬ್ಬೊಬ್ಬರು ಜ್ಞಾನಿಗಳಿರುವದರಿಂದ ದೇವರಿಗೆ ದೇವತ್ವವು ಉಳಿದುಕೊಂಡಿರುವದು. ಹೀಗೆ ದೇವರ ಇರುವಿಕೆಯೇ ಜ್ಞಾನಿಗಳನ್ನವಲಂಬಿಸಿಕೊಂಡಿರುವದರಿಂದ ಸಾಕ್ಷಾದ್ವಿಷ್ಣುವಿಗಿಂತಲೂ ವಸಿಷ್ಠರನ್ನು ಹೆಚ್ಚಿನವರೆನ್ನಬೇಕು; ಇರಲಿ. ಶ್ರೀರಾಮಚಂದ್ರನು ಉತ್ತಮವಾದ ಸಂಪ್ರದಾಯವನ್ನು ಕಾಪಾಡುವದಕ್ಕಾಗಿ ಮೊದಲು ವಸಿಷ್ಠರ ಬಳಿಗೆ ನಡೆದುಕೊಂಡು ಬಂದು ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಅವರೂ ಅವನನ್ನು ಬಾಚಿ ತಬ್ಬಿಕೊಂಡು ಸಂತೋಷಪರವಶರಾದರು.

ಅಲ್ಲಿಂದ ರಾಮನು ತಾಯಿಯರ ದರ್ಶನವನ್ನು ತೆಗೆದುಕೊಳ್ಳುವದಕ್ಕೆ ಹೊರಟು ಮೊದಲು ಸರಳಸ್ವಭಾವದಿಂದಲೂ ಪ್ರೇಮಬುದ್ಧಿಯಿಂದಲೂ ಕೈಕೆಯಿಯ ಬಳಿಗೆ ಹೋಗಿ ಆಕೆಯ ಕಾಲುಗಳ ಮೇಲೆ ಬಿದ್ದು "ನಿನ್ನ ಅನುಗ್ರಹದಿಂದ ನನಗೆ ಎಷ್ಟೋ ಜನ ಸಾಧುಸಂತರ ಸಮಾಗಮವಾಯಿತು" ಎಂದು ಹೇಳಿಕೊಂಡನು. ಕೈಕೆಯಿಗೆ ಲಜ್ಜೆಯಿಂದ ವಾಗ್ಬಂಧವುಂಟಾದದ್ದಲ್ಲದೆ ಸಹಜವಾದ ಪ್ರೇಮದಿಂದ ಅವಳ ಕಣ್ಣುಗಳಲ್ಲಿ ನೀರು ಸುರಿಯಿತು. ಉಳಿದ ತಾಯಿಯರನ್ನೂ ಕಂಡದ್ದಾಯಿತು. ಅವರೆಲ್ಲರೂ ಪ್ರೇಮದಿಂದ ಅತ್ತದ್ದೂ ಕರೆದದ್ದೂ ಆಯಿತು. ಅರುಂಧತಿಗೆ ನಮಸ್ಕಾರವನ್ನು ಮಾಡಿ ಆಶೀರ್ವಾದವನ್ನು ಪಡೆದದ್ದೂ ಆಯಿತು. ಇದೆಲ್ಲಾ ಆಗುತ್ತಲೇ ಎಲ್ಲರೂ ಬಂದು

ತನ್ನ ಆಶ್ರಮಸ್ಥಳವನ್ನು ಪವಿತ್ರವಾಗಿ ಮಾಡಬೇಕೆಂದು ರಾಮನು ಬೇಡಿಕೊಂಡನು. ಅದರಂತೆ ಎಲ್ಲರೂ ಅಲ್ಲಿಗೆ ಬಂದರು. ಬಹುದೂರ ದಿಂದ ಬಂದಿದ್ದ ತಾಯಿ, ಗುರುಗಳು, ತಮ್ಮ— ಮೊದಲಾದವರ ದರ್ಶ ನದಿಂದ ಆದ ಆನಂದದ ಸಡಗರದಲ್ಲಿ— ಹಿಂದೆ ಭರತನು ಸೋದರ ಮಾವನ ಮನೆಯಿಂದ ಬಂದು ತಾಯಿಯನ್ನು ಕಂಡಾಗ, ಅದು ವರೆಗೆ ತಂದೆಯು ಸ್ವರ್ಗಸ್ಥನಾಗಿದ್ದರೂ ಅವನು ಅದರ ಕಡೆಗೆ ಹೇಗೆ ಲಕ್ಷ್ಯವಿಲ್ಲದವನಾಗಿದ್ದನೋ ಹಾಗೆ— ತಾಯಿಯರ ಸ್ಥಿತಿಗತಿಗಳಿಂದ ಲೇ ತಂದೆಯ ಸ್ಥಿತಿಗತಿಗಳನ್ನೂಹಿಸುವದರ ಕಡೆಗೆ ಆಗ ಶ್ರೀರಾಮನ ಲಕ್ಷ್ಯವು ಹರಿಯಲಿಲ್ಲ.

## ಶ್ರೀರಾಮಾಶ್ರಮವಾಸ

ಮಾಯಾಪ್ರಭಾವಪ್ರದರ್ಶನವೆಂಬ ನಾಟಕದ ಈ ಮೊದಲನೇ ಅಂಕವು ಮುಗಿದ ಮೇಲೆ ವಸಿಷ್ಠರು ದಶರಥನ ಮರಣವಾರ್ತೆಯನ್ನು ಹೊರಗೆಡಹಿದರು. ಅದನ್ನು ಕೇಳುತ್ತಲೇ ರಾಮನ ದುಃಖವು ಉಕ್ಕಿ ಬಂತು. ತಾನು ಪ್ರೇಮಪಾತ್ರನಾಗಿದ್ದದ್ದೇ ತಂದೆಯ ಮರಣಕ್ಕೆ ಕಾರಣವಾದುದನ್ನರಿತು ಆ ದುಃಖವು ಮತ್ತಷ್ಟು ಉಲ್ಬಣವಾ ಯಿತು. ಮಹಾಧೀರನಾದ ಅವನ ಧೀರತ್ವವೆಲ್ಲಾ ಸೂರೆಯಾಗಿ ಹೋಯಿತು. ಕಿವಿಗೆ ಸೀಸವನ್ನು ಕಾಸಿ ಹೊಯ್ದಂತಾದ ಆ ಮರಣವಾರ್ತೆಯನ್ನು ಕೇಳುತ್ತಲೇ ಸೀತೆಯೂ ಲಕ್ಷ್ಮಣನೂ ಬಹ ಳವಾಗಿ ಪ್ರಲಾಪಿಸಿದರು. ಒಬ್ಬರನ್ನು ನೋಡಿ ಒಬ್ಬರು ಅಳು ವದಕ್ಕೆ ಮೊದಲಾಗಿ ದಶರಥನ ಮರಣವು ಆಗ ತಾನೇ ಆದಂತೆ ಆಗಿ ಎರಡನೇ ಅಂಕವು ಮುಂದೆ ಸಾಗಿತು. ಇದನ್ನೆಲ್ಲಾ ವಸಿಷ್ಠರು ಸಮಾಧಾನ ಮಾಡಿದರು. ಎಲ್ಲರೂ ಮಂದಾಕಿನಿಯಲ್ಲಿ ಸ್ನಾನ ಮಾಡಿ ದರು. ಆ ದಿನ ರಾಮಚಂದ್ರನು ನಿರ್ಜಲವ್ರತವನ್ನು ಮಾಡಿದನು. ವಸಿಷ್ಠರ ಮಾತನ್ನು ಕೂಡ ಕೇಳದೆ ಆ ದಿನ ಎಲ್ಲರೂ ನಿರಾಹಾರಿಗಳಾ ಗಿಯೇ ಇದ್ದರು. ವೇದವಿಧಿಯನ್ನು ಅನುಸರಿಸಿ ವಸಿಷ್ಠರು ಹೇಳಿದಂತೆ ಶ್ರೀರಾಮನು ಪಿತೃಕಾರ್ಯವನ್ನು ಸಾಂಗವಾಗಿ ಮಾಡಿ ಶುದ್ಧನಾದನು.

ಸತ್ತವರಿಗಾಗಿ ಬದುಕಿದವರು ಉತ್ತರಕ್ರಿಯೆಗಳನ್ನು ಮಾಡಬೇಕೆಂದು ಈಗಿನವರಿಗೆ ಸಂಶಯವು ಬರಬಹುದು. ಏಕೆಂದರೆ ಸತ್ತವರ ಲೋಕವೇ ಬೇರೆ; ನಮ್ಮ ಲೋಕವೇ ಬೇರೆ. ಸತ್ತವರಿಗೆ ನಾವು ಕಾಣಿಸುವೆವೋ ಇಲ್ಲವೋ ನಮಗೆ ತಿಳಿಯದು. ನಮಗಂತು ಸತ್ತವರು ಕಾಣು ವದಿಲ್ಲ. ಅವರ ದೇಹವನ್ನು ನಾವು ಸುಟ್ಟೋ ಹೂಳಿಯೋ ಬಿಟ್ಟ ಮೇಲೆ ಅವರೆಲ್ಲಿರುವರೋ ಹೇಗಿರುವರೋ ನಾವರಿಯೆವು. ಇಷ್ಟೇ ಅಲ್ಲ; ಅವರಿರುವರೋ ಇಲ್ಲವೋ ಅದೇ ಸಂಶಯಾಸ್ಪದವಾಗಿರುವದು. ಆದ್ದರಿಂದ ನಾವು ಅವರಿಗಾಗಿ ಇತರರಿಗೆ ಕೊಡುವ ಅನ್ನನೀರುಗಳೂ ದಾನಧರ್ಮಗಳೂ ಅವರಿಗೆ ಮುಟ್ಟುವವೋ ಇಲ್ಲವೋ ಎಂದು ಸಂದೇಹ ಬರುವದು ಲೌಕಿಕವಾದ ಮನಸ್ಸಿಗೆ ಸ್ವಭಾವವೇ ಆಗಿದೆ. ಭೌತಿಕ ದೃಷ್ಟಿಯಿಂದ ಈ ವಿಷಯವನ್ನು ಮನಗಾಣಿಸುವದಕ್ಕೆ ಬರುವ ಹಾಗಿಲ್ಲ. ಆದರೆ ಸತ್ತವರಿಗಾಗಿ ಶ್ರಾದ್ಧಾದಿಗಳನ್ನು ಮಾಡತಕ್ಕದ್ದೆಂದು ಪೂರ್ವಿಕರು ವಿಧಿಸಿದ್ದಾರೆ. ಇಂಥ ವಿಧಿಗಳು ಸಹಸ್ರಾರು ಇವೆ. ಇವುಗಳನ್ನೆಲ್ಲಾ ಅವರು ಅಲೌಕಿಕದೃಷ್ಟಿಯಿಂದ ಗೊತ್ತುಮಾಡಿರು ವರು. ನಮಗೆ ಆದೃಷ್ಟಿ ಇಲ್ಲವಾದ್ದರಿಂದ ಅದರ ಮರ್ಮವು ನಮಗೆ ತಿಳಿಯದು. ಅವರು ಹೇಳಿರುವ ಎಷ್ಟೋ ವಿಧಿಗಳ ಕಾರಣವು ನಮಗೆ ಸಮಂಜಸವಾಗಿ ತಿಳಿದಿಲ್ಲ. ಹೀಗೆ ಶ್ರಾದ್ಧವಿಧಿಯ ಕಾರಣವು ನಮಗೆ ತಿಳಿಯದಿದ್ದರೂ ಇಲ್ಲಿ ನಾವು ಮಾಡುವ ದಾನಧರ್ಮಗಳು ಪರಲೋಕದ ಲ್ಲಿರುವವರಿಗೆ ಮುಟ್ಟುತ್ತವೆಂದು ನಮ್ಮ ಪೂರ್ವಿಕಮಹರ್ಷಿಗಳು ಹೇಳಿ ರುವ ಮಾತಿನ ಮೇಲೆ ನಾವು ನಂಬಿಕೆಯಿಡಬೇಕು. ಯಾರು ಲೋಕೋ ತ್ತರವಾದ ವಿಚಾರದಲ್ಲಿ ನಿಪುಣರಾಗಿರುತ್ತಾರೋ ಅವರು ಹೇಳುವ ಮಾತಿಗೆ ನಾವು ಗೌರವವನ್ನು ಕೊಡಬೇಕು. ರಾಜಕೀಯ ವ್ಯವಹಾರ ಪದ್ಧತಿಯಲ್ಲಿ ನಿಪುಣರಾದ ವಕೀಲರು ಹೇಳುವ ಮಾತುಗಳ ವಿಷಯ ದಲ್ಲಿ ಹೆಚ್ಚು ವಿಚಾರವನ್ನು ಮಾಡದೆ ಮಹಾಮಹಾ ಬುದ್ಧಿಶಾಲಿ ಗಳು ಕೂಡ ನಂಬುವದಿಲ್ಲವೆ? ನಮ್ಮ ಪೂರ್ವಿಕರು ವೈದಿಕಧರ್ಮ ಪದ್ಧತಿಯಲ್ಲಿ ನಿಪುಣರು. ಅವರ ಮಾತನ್ನು ಗೌರವಿಸುವದಕ್ಕೆ ಹಿಂದು ಮುಂದು ನೋಡಬೇಕಾದ್ದೇಕೆ? ಇನ್ನೂ ವಿಚಾರಮಾಡಿದರೆ ವಕೀಲರ

ಮಾತನ್ನು ನಂಬುವದಕ್ಕೆ ಹಿಂದುಮುಂದು ನೋಡಬೇಕಾಗಿರುವದು. ಏಕೆಂದರೆ ಅವರು ತಮಗೆ ಬರಬೇಕಾದ ದುಡ್ಡಿನ ಕಡೆ ಕಣ್ಣಿಟ್ಟು ಕೊಂಡು ಹೇಳುವರು. ನಮ್ಮ ಪೂರ್ವಿಕ ಮಹರ್ಷಿಗಳು ಹಾಗಲ್ಲ. ಅವರಿಗೆ ನಮ್ಮಿಂದಾಗಬೇಕಾದ್ದೇನೂ ಇರುವದಿಲ್ಲ. ಅವರಿಂದಲೇ ನಮಗೆ ಆಗತಕ್ಕದ್ದು ಬಹಳ ಇದೆ. ನಾವು ದಿನದಿನಕ್ಕೆ ಉತ್ತಮ ಸ್ಥಿತಿಯನ್ನು ಪಡೆಯಬೇಕೆಂಬುದೇ ಅವರ ಬಯಕೆ. ಆದ್ದರಿಂದ ಅವರು ನಮಗೆ ಹೇಳಿರುವ ಮಾತುಗಳೆಲ್ಲಾ ಪುತ್ರವಾತ್ಸಲ್ಯದಿಂದ ಹೇಳಿದಂಥ ಪರಮತತ್ತ್ವಗಳೆಂದು ತಿಳಿಯಬೇಕು. ಇನ್ನೂ ವಿಚಾರ ಮಾಡಿದರೆ ನಾವು ಮಾಡುವ ದಾನಧರ್ಮಗಳು ಸತ್ತವರಿಗೆ ಮುಟ್ಟಿ ದರೂ ಮುಟ್ಟಲಿ, ಮುಟ್ಟದೆ ಹೋದರೂ ಹೋಗಲಿ. ನಾವು ನಮ್ಮ ಹಿರಿಯರ ಜ್ಞಾಪಕಾರ್ಥವಾಗಿ ದಾನಧರ್ಮಗಳನ್ನು ಮಾಡಿ ಅವರ ವಿಷಯಕವಾದ ಪಿತೃವಾತ್ಸಲ್ಯವನ್ನು ತೋರಿಸಿದೆವೆಂಬ ಕೃತಾರ್ಥ ತೆಯ ರೂಪವಾದ ಪ್ರತ್ಯಕ್ಷಫಲವಾದರೂ ತಪ್ಪಲಾರದಷ್ಟೆ. ವೇದ ಶಾಸ್ತ್ರಗಳಲ್ಲಿ ವಿಶ್ವಾಸವುಳ್ಳ ಆಸ್ತಿಕರು ತಮ್ಮ ಪಿತೃವಿಷಯಕವಾದ ಗೌರವವನ್ನು ವೇದೋಕ್ತರೀತಿಯಲ್ಲಿ ತೋರಿಸುವರು. ಕೇವಲ ಐಹಿಕ ದೃಷ್ಟಿಯುಳ್ಳವರು ವೇದೋಕ್ತರೀತಿಯಿಂದ ಮಾಡದೆ ಹೋದರೂ ಲೌಕಿಕಪದ್ಧತಿಯಿಂದ ದಿವಂಗತರ ಜ್ಞಾಪಕಾರ್ಥವಾದ ಕರ್ಮಗ ಳನ್ನು ಮಾಡುವರು. ದೇಶಹಿತಕ್ಕಾಗಿ ತನುಮನಧನಗಳನ್ನು ವಿನಿ ಯೋಗಿಸಿದ ಮಹನೀಯರ ಪುಣ್ಯತಿಥಿಗಳನ್ನೂ ಎಷ್ಟೋ ಜನ ದೇಶಾ ಭಿಮಾನಿಗಳು ಮಾಡುತ್ತಾರೆ. ಇವರೆಲ್ಲರೂ ತಾವು ಮಾಡುವ ಉಪ ಚಾರಗಳು ಸತ್ತವರಿಗೆ ಮುಟ್ಟದಿದ್ದರೂ ತಾವು ತಮ್ಮ ಕರ್ತವ್ಯ ವನ್ನು ಮಾಡಿದೆವೆಂದು ಸಂತುಷ್ಟರಾಗುವದಿಲ್ಲವೆ? ಅದರಂತೆ ನಾವು ನಮ್ಮ ಪಿತೃಭಕ್ತಿಯನ್ನು ತೋರಿಸಿದೆವೆಂಬ ಕೃತಾರ್ಥಬುದ್ಧಿಯುಂಟಾ ಗುವದಕ್ಕಾದರೂ ಶ್ರಾದ್ಧಗಳನ್ನು ಮಾಡಲೇಬೇಕು. ಅದರಂತೆ ನಾವು ಮಾಡದೆ ಹೋದರೆ ನಮ್ಮ ಪಿತೃಗಳ ಮಾತೊಂದುಕಡೆ ಇರಲಿ. ಅವರ ಆಜ್ಞೆಯನ್ನು ಉಲ್ಲಂಘನೆ ಮಾಡಿದ ದೋಷವು ಮಾತ್ರ ನಮ್ಮನ್ನು ಬೆನ್ನಟ್ಟದೆ ಬಿಡುವದಿಲ್ಲ. ಆದ್ದರಿಂದ ರಾಮನು ಅದನ್ನು

ಮಾಡಿ ಶುದ್ಧನಾದನು. ನಿಜವಾಗಿ ನೋಡಿದರೆ ರಾಮನ ನಾಮವನ್ನುಚ್ಚಾರಮಾಡಿದರೇ ಸಾಕು; ಅದು ಮಹಾಮಹಾಪಾತಕಗಳನ್ನು ಕೂಡ ಅಗ್ನಿಯಂತೆ ಸುಟ್ಟು ಹಾಕಿ ಬಿಡುವದು; ನಿಸ್ಸಂಶಯವಾಗಿ ಅವನ ಸ್ಮರಣೆಯೇ ಸರ್ವಮಂಗಳಗಳಿಗೂ ಮೂಲವಾಗಿರುವದು. ಇದರೂ ಸಮಸ್ತ ತೀರ್ಥಗಳಿಗೂ ತೀರ್ಥಸ್ವರೂಪವಾದ ಗಂಗೆಯ ಒಂದು ತೀರ್ಥದ ಪ್ರೋಕ್ಷಣೆಯಿಂದ ಶುದ್ಧವಾಗುವಂತೆ ಶ್ರೀರಾಮಚಂದ್ರನು ತಂದೆಯ ಉತ್ತರಕ್ರಿಯೆಯನ್ನು ಮಾಡಿ ಪರಿಶುದ್ಧನಾದನು.

ಆಮೇಲೆ ಅಲ್ಲಿಗೆ ಬಂದಿದ್ದವರಿಗೆಲ್ಲಾ ಆತಿಥ್ಯವಾಯಿತು. ನಗರವಾಸಿಗಳಾದ ಜನರಿಗೆ ಕಂದಮೂಲಗಳು ರುಚಿಸಲಾರವೆಂದು ರಾಮನು ಸಂಕೋಚಗೊಂಡಿದ್ದನು; ಆದರೆ ಅವುಗಳ ಸವಿಗೆ ಮನಸ್ಸನ್ನು ಸೋತು ಅವರೆಲ್ಲರೂ ಅವುಗಳನ್ನು ಬಿಟ್ಟಗಲಲಾರದಂತಾದರು. ಶ್ರೀರಾಮಸಂದರ್ಶನದಿಂದ ಅವರ ಸರ್ವೇಂದ್ರಿಯಗಳಲ್ಲಿಯೂ ಅಮೃತಾವಿರ್ಭಾವವಾಗುತ್ತಿತ್ತಾದ್ದರಿಂದ ಅವರಿಗೆ ಏನು ತಿಂದರೂ ಸವಿ; ಏನು ಕೇಳಿದರೂ ಇಂಪು; ಏನು ನೋಡಿದರೂ ಅಂದ; ಏನು ಮೂಸಿದರೂ ಸುಗಂಧ; ಏನು ಮುಟ್ಟಿದರೂ ಮೃದು; ಹೀಗೆ ಎಲ್ಲರೂ ಅಯೋಧ್ಯೆಯನ್ನು ಸಂಪೂರ್ಣವಾಗಿ ಮರೆತು ಅಲ್ಲಿ ಆನಂದಪರವಶರಾಗಿ ವಿಹರಿಸುತ್ತಿದ್ದರು.

## ರಾಮನನ್ನು ಹಿಂದಿರುಗಿಸುವ ವಿಚಾರ

ಆಗ ಭರತನು ಬಂದ ಕಾರ್ಯವನ್ನು ಸಾಧಿಸಬೇಕೆಂದು ವಸಿಷ್ಠರೊಡನೆ ಆಲೋಚನೆಯನ್ನು ನಡೆಸಿದನು. ಕೊನೆಗೆ ನಿಶ್ಚಯವಾದುದೇನೆಂದರೆ ಒಬ್ಬರು ವನವಾಸಮಾಡತಕ್ಕದೆಂದೂ ಒಬ್ಬರು ರಾಜ್ಯಭಾರವನ್ನುವಹಿಸತಕ್ಕದ್ದೆಂದೂ ದಶರಥನ ಆಜ್ಞೆಯಷ್ಟೆ; ಅವನ ಆಜ್ಞೆಯೂ ಸಾಗಿ ತಮ್ಮ ಇಷ್ಟವೂ ಕೈಗೂಡಬೇಕಾದರೆ ಭರತಶತ್ರುಘ್ನರು ವನವಾಸ ಮಾಡತಕ್ಕದ್ದೆಂದೂ ಸೀತಾರಾಮಲಕ್ಷ್ಮಣರು ಹಿಂದಿರುಗಬೇಕೆಂದೂ ಭರತವಸಿಷ್ಠರು ತಮ್ಮಲ್ಲಿ ತಾವೇ ಗೊತ್ತುಮಾಡಿಕೊಂಡರು. ಈ ಯೋಚನೆಯು ಎಲ್ಲರ ಮನಸ್ಸಿಗೂ ಒಪ್ಪಿತು. ಹೀಗೆ ನಡೆ

ಸಬಹುದೆಂದು ವಸಿಷ್ಠರೂ ತಲೆಯನ್ನು ಹಾಕಿದರು. ಆ ತಾಯಿಯರಿಗೆ ಮಾತ್ರ ಇದು ಅಷ್ಟು ಸಮ್ಮತವಾಗಲಿಲ್ಲ. ಏಕೆಂದರೆ ಎಡಗಣ್ಣನ್ನು ಚುಚ್ಚಿದರೇನು? ಬಲಗಣ್ಣನ್ನು ಚುಚ್ಚಿದರೇನು? ನೋವು ತಪ್ಪಿದ್ದೇ ಅಲ್ಲ. ಆದರೂ ಹೇಗಾದರೂ ಸೀತಾರಾಮಲಕ್ಷ್ಮಣರು ಅಯೋಧ್ಯೆಗೆ ಹಿಂದಿರುಗಿದರೆ ಸಾಕೆಂದು ಎಲ್ಲರೂ ಬಯಸಿದರು. ಅದರಂತೆ ವಸಿಷ್ಠಮಹರ್ಷಿಗಳು ಶ್ರೀರಾಮನ ಬಳಿಗೆ ಬಂದು ಸತ್ಕಾರವನ್ನು ಪಡೆದು ಕುಳಿತು ಮೆಲ್ಲಗೆ ಮಾತುತೆಗೆದರು. “ರಾಮ, ನಿನಗೆ ಧರ್ಮವನ್ನೂ ನೀತಿಯನ್ನೂ ನಾನು ಕಲಿಸಬೇಕಾದ್ದಿಲ್ಲ. ನೀನು ಸರ್ವಾಂತರ್ಯಾಮಿ. ಪುರಜನರೂ ತಾಯಿಯರೂ ಭರತನೂ ಕೂಡ ಆರ್ತರಾಗಿ ನಿನ್ನ ಬಳಿಗೆ ಬಂದಿರುವರು. ಅವರಿಗೆ ಹಿತವಾದ ಮಾರ್ಗವನ್ನು ನೀನು ಹೇಳಬೇಕು. ಆರ್ತಜನರ ವಿಚಾರಗಳು ಯಾವಾಗಲೂ ವಿಚಾರಪೂರ್ವಕವಾಗಿರುವದಿಲ್ಲ” ಎಂದು ವಸಿಷ್ಠರು ಪೀಠಿಕೆಯನ್ನು ಹಾಕಿದ್ದಕ್ಕೆ ರಾಮಚಂದ್ರನು “ಮಹಾಸ್ವಾಮಿ, ಎಲ್ಲವೂ ತಮ್ಮ ಕೈಯಲ್ಲಿಯೇ ಇದೆ. ನಮ್ಮ ತಂದೆಯ ಪ್ರತಿಜ್ಞೆ ಪೂರ್ಣವಾಗಬೇಕು. ಮತ್ತು ಎಲ್ಲರಿಗೂ ಹಿತವೂ ಆಗಬೇಕು. ಹೀಗೆ ತಾವು ಏನಾಜ್ಞೆ ಮಾಡಿದರೂ ಅದನ್ನು ನಡೆಸುವದಕ್ಕೆ ನಾನೂ ಬದ್ಧನು; ಇತರರೂ ಬದ್ಧರು” ಎಂದು ಉತ್ತರವನ್ನು ಕೊಡಲು, ವಸಿಷ್ಠರು “ರಾಮ, ನೀನು ಹೇಳುವದು ಸರಿ. ಭರತನ ಪ್ರೇಮಾವೇಶವು ನನ್ನ ಮನಸ್ಸನ್ನೂ ಅಲ್ಲೋಲಕಲ್ಲೋಲ ಮಾಡಿರುವದರಿಂದ ನನಗೂ ಏನು ಹೇಳುವದಕ್ಕೂ ಬಾಯಿ ಬರದು. ಆದ್ದರಿಂದ ಭರತನ ಮನೋಗತವನ್ನು ಕೇಳಿಕೊಂಡು ನೀನೇ ತಕ್ಕ ಉತ್ತರವನ್ನು ಕೊಡಬೇಕಾಗಿರುವದು” ಎಂದು ತಮ್ಮ ಪೀಠಿಕೆಯನ್ನು ಮುಂದೆ ಸಾಗಿಸಿದರು. ಭರತನ ವಿಷಯದಲ್ಲಿ ಗುರುಗಳಿಗಿರುವ ಪ್ರೀತಿಯನ್ನು ನೋಡಿ ರಾಮನಿಗೆ ಅತ್ಯಾನಂದವಾಯಿತು. ಆಗ ರಾಮನು ಹೇಳಿದ್ದೇನೆಂದರೆ “ತಂದೆಯ ಪಾದದಾಣೆಮಾಡಿ ಹೇಳುತ್ತೇನೆ, ಭರತನಂಥ ಸೋದರನು ಈ ಸೃಷ್ಟಿಯಲ್ಲಿನ್ನೊಬ್ಬನಿಲ್ಲ. ಯಾವ ಮನುಷ್ಯನು ಗುರುಗಳಲ್ಲಿ ಭಕ್ತಿಯನ್ನಿಟ್ಟಿರುವನೋ ಅವನೇ ವ್ಯವಹಾರದೃಷ್ಟಿಯಿಂದಲೂ ಶಾಸ್ತ್ರ

ದೃಷ್ಟಿಯಿಂದಲೂ ಕೂಡ ಭಾಗ್ಯಶಾಲಿ. ವಸಿಷ್ಠರ ಈ ಬಗೆಯ ಅನುಗ್ರಹಕ್ಕೆ ಪಾತ್ರನಾಗಿರುವ ಭರತನ ಸದ್ಗುಣವು ವರ್ಣನಾತೀತವು. ನನಗಿಂತ ಕಿರಿಯವನಾದ ಅವನ ವಿಷಯವನ್ನು ಅವನ ಮುಂದೆಯೇ ನಾನು ಹೀಗೆ ಹೇಳುವದು ಚೆನ್ನಾಗಿ ಕಾಣಲಾರದು. ಆದ್ದರಿಂದ ಭರತನ ಅಭಿಪ್ರಾಯವು ತಿಳಿದರೆ ಅದರಂತೆ ಮಾಡಬಹುದು'' ಹೀಗೆಂದು ರಾಮನು ಹೇಳಿ ಸುಮ್ಮನಾದನು. ಇದನ್ನು ಕೇಳಿದವರೆಲ್ಲರೂ ರಾಮನ ಮನೋಗತವು ತಮ್ಮ ಇಚ್ಛೆಗೇ ಅನುಕೂಲವಾಗಿರುವದೆಂದಂದುಕೊಂಡು ಅತ್ಯಾನಂದಭರಿತರಾದರು. ಪ್ರಕೃತೋಪಾಯವನ್ನು ಸೂಚಿಸುವ ಭಾರವೆಲ್ಲಾ ತನ್ನ ಮೇಲೆ ಬಿತ್ತೆಂಬ ಯೋಚನೆಯಲ್ಲಿ ಭರತನಿಗೆ ಏನೂ ತೋಚದೆ ಹೋಯಿತು. ಕೊನೆಗೆ ಹೇಗೋ ಎದ್ದುನಿಂತನು. ಅವನ ಮೈಮೇಲೆ ರೋಮಾಂಚಗಳುಂಟಾದವು. ಅವನ ಕಣ್ಣುಗಳಿಂದ ನೀರು ಸುರಿಯಲಾರಂಭವಾಯಿತು. ಪ್ರೇಮಾವೇಶದಿಂದ ಕಂಠವು ಉಬ್ಬಿಕೊಳ್ಳಲು ಭರತನು ಗದ್ಗದಸ್ವರದಿಂದ ಹೇಳುವದಕ್ಕೆ ಮೊದಲುಮಾಡಿದನು. "ಶ್ರೀರಾಮನು ಅಪರಾಧಿಗಳ ಮೇಲೆ ಕೂಡ ಕೋಪವನ್ನು ತೋರಿಸುವದಿಲ್ಲವೆಂಬುದು ನನಗೆ ಗೊತ್ತು. ನನ್ನ ಮೇಲಂತು ಅವನ ಕೃಪೆಯು ಪೂರ್ಣವಾಗಿದೆ. ಚಿಕ್ಕಂದಿನ ಆಟಪಾಟಗಳಲ್ಲಿ ಕೂಡ ಅವನು ನನ್ನ ವಿಷಯದಲ್ಲಿ ಬೇಸರಗೊಂಡವನಲ್ಲ; ನನ್ನನ್ನು ಎಂದೂ ಅವನು ಬಿಟ್ಟವನಲ್ಲ; ನನ್ನ ಮನೋಭಂಗವನ್ನೆಂದೂ ಮಾಡಿದವನಲ್ಲ. ಅವನ ಪ್ರೇಮಪದ್ಧತಿಯನ್ನು ನಾನು ಬಲ್ಲೆ. ನನ್ನ ದುರ್ದೈವದಿಂದ ಆಗಿರುವ ಈ ನಮ್ಮ ಸ್ವಾಮಿಯ ವನವಾಸಕ್ಕೆ ನಮ್ಮ ತಾಯಿ ಕಾರಣಳಾಗಿರುವದು ನನ್ನ ಮನಸ್ಸಿಗೆ ಅಪಾರವಾದ ವ್ಯಥೆಯನ್ನುಂಟುಮಾಡಿದೆ. ಸೀತಾಲಕ್ಷ್ಮಣರೊಡನೆ ಈ ನಮ್ಮ ಸ್ವಾಮಿಯು ರಾಜವೇಷವನ್ನು ಬಿಟ್ಟು ಮುನಿವೇಷವನ್ನು ಧರಿಸಿರುವದನ್ನೂ ವನವಾಸಕ್ಕೆ ಬಂದಿರುವದನ್ನೂ ಇಲ್ಲಿ ಪಾದಚಾರಿಯಾಗಿರುವದನ್ನೂ ಇದರಿಂದ ತಾಯಿಯರೆಲ್ಲರೂ ದುಃಖಿತರಾಗಿರುವದನ್ನೂ ಕಣ್ಣಾರೆ ಕಾಣುತ್ತ ನಾನಿನ್ನೂ ಜೀವಿಸಿದ್ದೇನಲ್ಲ! ಈ ದುಃಖಾಗ್ನಿಯಲ್ಲಿ ಬೆಂದು ಬೆಂಡಾಗಿರುವ ನನಗೆ ಏನೂ ತೋಚು

ವದಿಲ್ಲ.'' ಹೀಗೆಂದು ಹೇಳಿ ಭರತನು ಸ್ತಬ್ಧನಾದನು. ಅವನ ದೀನ ವಾಣಿಯು ಎಲ್ಲರ ಮನಸ್ಸನ್ನೂ ಕರಗಿಸಿತು. ಎಲ್ಲರ ಶೋಕವೂ ಮರುಕಳಿಸಿತು. ಇದನ್ನು ತಗ್ಗಿಸುವದಕ್ಕೆ ವಸಿಷ್ಠರು ತಮ್ಮ ಪುರಾಣ ಪುಸ್ತಕಭಂಡಾರವನ್ನೆಲ್ಲಾ ಬಿಚ್ಚಿ ಸೂರೆಮಾಡಬೇಕಾಯಿತು.

ಆಮೇಲೆ ರಾಮನು ''ಭರತ, ಈಶ್ವರಸಾಕ್ಷಿಯಾಗಿ ನಾನು ಹೇಳುತ್ತೇನೆ. ನಿನ್ನಂಥವನಿಂದಲೇ ಈ ಪೃಥ್ವಿ ನಿಂತಿರುವದು. ವೈರವನ್ನೂ ಪ್ರೇಮವನ್ನೂ ಬಾಯಲ್ಲಿ ಆಡಿತೋರಿಸಬೇಕಾದ್ದಿಲ್ಲ. ಅದು ಮನಸ್ಸಿಗೆ ತಾನಾಗಿ ತಿಳಿಯುವದು. ಕಾಡಿನಲ್ಲಿರುವ ಮೃಗಪಕ್ಷಿಗಳು ಕೂಡ ಅಹಿಂಸಾವ್ರತಪರಾಯಣರಾದ ಋಷಿಗಳನ್ನು ಕಂಡರೆ ಹತ್ತಿರಕ್ಕೆ ಹೋಗುವವು; ಕಿರಾತರನ್ನು ಕಂಡರೆ ಬೆದರಿ ಓಡಿ ಹೋಗುವವು. ಪಶುಪಕ್ಷಿಗಳಿಗೇ ಇಷ್ಟರಮಟ್ಟಿಗೆ ತಿಳಿಯುತ್ತಿರುವಾಗ ಮನುಷ್ಯನಿಗೆ ತಿಳಿಯುವದೆಂದು ಹೇಳಬೇಕಾದ್ದೇನಿದೆ! ವತ್ಸ, ನಿನ್ನ ಮನಸ್ಸು ನನಗೆ ಗೊತ್ತಿದೆ. ಆದರೆ ನಾನೇನು ಮಾಡಲಿ? ನನಗೂ ಏನೂ ತೋಚದು. ನಮ್ಮ ತಂದೆಯು ನನ್ನನ್ನು ಕಾಡಿಗೆ ಕಳುಹಿಸುವದಕ್ಕೆ ಕೂಡ ಹಿಂದೆಗೆಯದೆ ತನ್ನ ಸತ್ಯವ್ರತವನ್ನು ಪರಿಪಾಲನೆಮಾಡಿಕೊಂಡನು. ಮತ್ತು ಆ ಸತ್ಯವ್ರತದ ಸಡಗರದಲ್ಲಿ ದೇಹತ್ಯಾಗವನ್ನು ಕೂಡ ಮಾಡಿಬಿಟ್ಟನು. ಈಗ ನಾನು ಅವನ ಆಜ್ಞೆಯನ್ನು ಮೀರುವದೆಂದರೆ ಮನಸ್ಸೊಪ್ಪುವದಿಲ್ಲ. ನಿನ್ನ ಮಾತನ್ನು ಮೀರುವದು ನನಗೆ ಅದಕ್ಕಿಂತಲೂ ಕಠಿನವಾಗಿದೆ. ಆದರೂ ನಿನ್ನ ಅಭಿಪ್ರಾಯವೇನೆಂಬುದನ್ನು ಸಂಕೋಚವಿಲ್ಲದೆ ಹೇಳು'' ಎಂದು ಕೇಳಿದನು. ಆಗ ಭರತನು ಕೈಜೋಡಿಸಿ ನಿಂತುಕೊಂಡು ''ಹೇ ದಯಾಸಾಗರ, ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿದ್ದಿ. ಇಷ್ಟರಿಂದಲೇ ನಾನು ಧನ್ಯನಾಗಿದ್ದೇನೆ. ಈಗ ನನ್ನ ದುಃಖವೆಲ್ಲಾ ಮಾಯವಾಯಿತು. ಏಕೆಂದರೆ ನಾನು ನಿನ್ನ ಸನ್ನಿಧಿಯಲ್ಲಿರುವದು ಕಲ್ಪವೃಕ್ಷದ ಕೆಳಗೆ ನಿಂತಂತಾಗಿದೆ. ಅರಸನಾಗಲಿ ತಿರುಕನಾಗಲಿ ಒಳ್ಳೆಯವನಾಗಲಿ ಕೆಟ್ಟವನಾಗಲಿ ಕಲ್ಪವೃಕ್ಷದ ಆಶ್ರಯದಲ್ಲಿ ನಿಂತು ಇಚ್ಛೆಯನ್ನು ಮಾಡಿದರೆ ಅದು ನೆರವೇರದೆ ಹೋಗುವದಿಲ್ಲ. ಆದರೆ ಸರ್ವರಿಗೂ ಹಿತವಾಗುವಂಥ ಉಪಾ

ಯವನ್ನು ಹೇಳುವ ಭಾರವನ್ನು ನೀನು ನನ್ನ ಮೇಲೆ ಹಾಕಿದ್ದು ಮಗು ವಿನ ಮೇಲೆ ಮಂದರಗಿರಿಯನ್ನು ಹೊರಿಸಿದಂತಾಗಿದೆ. ಆದರೂ ನಿನ್ನ ನುಗ್ರಹದಿಂದ ನಾನು ಅದನ್ನು ಹೊರುತ್ತೇನೆ. ಈಗ ನಾನು ಹೇಳ ಹೋಗುವ ಉಪಾಯವು ನಮ್ಮ ಸ್ವಾರ್ಥವನ್ನೇ ಸ್ಪಷ್ಟವಾಗಿ ವ್ಯಕ್ತ ಗೊಳಿಸುತ್ತದೆ. ಆದರೆ ನಮ್ಮ ಪ್ರಾರ್ಥನೆಯು ಪ್ರತ್ಯಕ್ಷರವನ್ನೂ ಹಾಗೆಯೇ ನಡೆಸಿಕೊಡಬೇಕೆಂದು ನಾನು ಹಠವನ್ನು ಹಿಡಿಯಲಾ ರೆನು. ಹಠವನ್ನು ಹಿಡಿಯುವದು ಸೇವಾಧರ್ಮವಲ್ಲ. ಪ್ರಭುವಿನ ಮನೋವೃತ್ತಿಯನ್ನು ಅನುಸರಿಸುವದೇ ನನ್ನ ಇಷ್ಟ. ಪ್ರಕೃತ ವಿಷಯವೇನೆಂದರೆ ನೀನು ಹಿಂದಿರುಗಿ ಬರಬೇಕೆಂಬುದೇ ಸರ್ವರ ಅಭಿ ಲಾಷೆ. ಈ ವಿಷಯದಲ್ಲಿ ನನಗೆ ತೋರುವದೇನೆಂದರೆ, ನನ್ನನ್ನೂ ಶತ್ರುಘ್ನನನ್ನೂ ವನವಾಸಕ್ಕೆ ಕಳುಹಿಸಿ ನೀವೆಲ್ಲರೂ ಅಯೋಧ್ಯೆಗೆ ಹೋಗಬೇಕು. ಅಥವಾ ಲಕ್ಷ್ಮಣಶತ್ರುಘ್ನರಿಬ್ಬರೂ ಅಯೋಧ್ಯೆಗೆ ಹೋಗಲಿ; ನಾನು ನಿನ್ನೊಡನೆ ಇರುವೆನು. ಅಥವಾ ನಾವು ಮೂವರು ತಮ್ಮಂದಿರೂ ವನವಾಸವನ್ನು ಮಾಡುತ್ತೇವೆ. ಸೀತಾಸಮೇತನಾಗಿ ನೀನು ಅಯೋಧ್ಯೆಗೆ ತೆರಳು. ಇವುಗಳಲ್ಲಿ ನಿನಗೆ ಯಾವದು ಒಪ್ಪು ತ್ತದೋ ಅದನ್ನು ಮಾಡು. ಮುಖ್ಯವಾಗಿ ನೀನು ನನ್ನನ್ನು ನಿನ್ನವ ನೆಂದರೆ ಸಾಕು. ಇದಕ್ಕಿಂತ ನನ್ನದೇನೂ ಹೆಚ್ಚಿನಪ್ರಾರ್ಥನೆಯಿಲ್ಲ'' ಎಂದು ಹೇಳಿ ಅಡ್ಡಬಿದ್ದನು. ರಾಮನು ಅಗತ್ಯವಾಗಿ ಅಯೋಧ್ಯೆಗೆ ಬರಲೇಬೇಕೆಂದು ಎಲ್ಲರೂ ಕಲಕಲವನ್ನೆಬ್ಬಿಸಿದರು. ಎಲ್ಲರ ಇಚ್ಛೆ ಯೂ ಪೂರ್ಣವಾಗುವದೆಂದು ಹೇಳಿ ವಸಿಷ್ಠರು ಎಲ್ಲರನ್ನೂ ಸಮಾ ಧಾನಗೊಳಿಸಿದರು.

## ಭರತನು ವ್ರತಸ್ಥನಾದದ್ದು

ಪ್ರೇಮದಿಂದ ಎದುರುನೋಡುತ್ತಿದ್ದ ಜನಮಂಡಲಿಯ ಮೇಲೆ ಒಂದುಸಲ ಕೃಪಾಕಟಾಕ್ಷವನ್ನು ಬೀರಿ ಪ್ರಸನ್ನಮುಖವುಳ್ಳವನಾಗಿ ರಾಮಚಂದ್ರನು ಭರತನನ್ನು ಹತ್ತಿರಕ್ಕೆ ಕರೆದು ಕೂಡಿಸಿಕೊಂಡು ದುಃಖಮಗ್ನರಾದ ಸರ್ವರೂ ಚೇತರಿಸಿಕೊಳ್ಳುವಂತೆ ತನ್ನ ಮೃದು ಮಧುರವಾಣಿಯಿಂದ ಸರ್ವರ ಮೇಲೆಯೂ ಅಮೃತವೃಷ್ಟಿಯನ್ನು

ಮಾಡುವಂಥವನಾಗಿ ಹೇಳಿದ್ದೇನೆಂದರೆ, "ವತ್ಸ, ಧರ್ಮಧುರೀಣನಾದ ನಿನ್ನ ಮಾತು ಅತ್ಯಂತ ಶ್ಲಾಘ್ಯವಾಗಿದೆ. ನಮ್ಮ ಸೂರ್ಯಕುಲದವರ ಸತ್ಯಸಂಧತೆಯೂ ಸನಾತನಪದ್ಧತಿಯೂ ಅದರ ಮೇಲೆ ನಮ್ಮ ತಂದೆಗಿದ್ದ ಪ್ರೀತಿಯೂ ನಿನಗೆ ಗೊತ್ತೇ ಇದೆ. ನಿನ್ನ ಅಭಿಪ್ರಾಯಕ್ಕೆ ವಿರುದ್ಧ ವಾಗಿ ಏನು ಹೇಳುವದಕ್ಕೂ ನನಗೆ ಬಾಯಿ ಬರುವದಿಲ್ಲ. ಆದರೂ ಪ್ರಸಂಗಾನುರೂಪವಾಗಿ ಈಗ ಹೇಳಬೇಕಾಗಿದೆ. ನನಗೆ ವನವಾಸವೂ ನಿನಗೆ ಅಯೋಧ್ಯೆಯ ವಾಸವೂ ಇರಬೇಕೆಂದು ನಮ್ಮ ತಂದೆಯ ಆಜ್ಞೆಯಿದೆ. ಹಿರಿಯರ ಆಜ್ಞೆಯಲ್ಲಿ ಸರ್ವಮಂಗಳಗಳೂ ಸೇರಿಕೊಂಡಿ ರುವವು. ಈ ಭೂಮಿಗೆ ಆದಿಶೇಷನಂತೆ ನಮಗೆ ಹಿರಿಯರ ಆಜ್ಞೆಯೇ ಆಧಾರವಾಗಿರುವದು. ಆದ್ದರಿಂದ ತಂದೆಯ ಆಜ್ಞೆಯನ್ನು ತಲೆಯ ಮೇಲೆ ಹೊತ್ತು ಅದರಂತೆ ನೀನೂ ಮಾಡಬೇಕು; ನನ್ನಿಂದಲೂ ಮಾಡಿ ಸಬೇಕು. ಇಷ್ಟೇ ಅಲ್ಲ. ನಮ್ಮ ತಂದೆಯ ಮಕ್ಕಳಾದ ನಾವಿಬ್ಬರೂ. ಹಾಗೆ ನಡೆಯುವಂತೆ ಮಾಡುವದು ಕೋಸಲರಾಜ್ಯದ ಸರ್ವಪ್ರಜೆಗಳ ಪಾಲಿಗೆ ಬಂದ ಕೆಲಸವಾಗಿದೆ. ಇಂಥ ಸಂದರ್ಭಗಳಲ್ಲಿ ನಮ್ಮ ಸ್ವಬು ದ್ಧಿಗಿಂತಲೂ ಗುರುಬುದ್ಧಿಯೇ ಶ್ರೇಯಸ್ಕರವಾದದ್ದು. ನಮಗೆಲ್ಲರಿಗೂ ಯಜಮಾನರಾಗಿ ಗುರುಗಳಿದ್ದಾರಷ್ಟೆ. ಅವರ ವಿಚಾರಪೂರ್ವಕವಾದ ಉಪದೇಶದಿಂದ ನಾವೆಲ್ಲರೂ ಕೃತಾರ್ಥರಾಗೋಣ." ಶ್ರೀರಾಮನು ಹೀಗೆ ಹೇಳಲು, ಆಗ ವಸಿಷ್ಠರು ಇನ್ನೇನು ಹೇಳುವದಕ್ಕೂ ತೋರದೆ ಸನಾತನ ಧರ್ಮಮೂರ್ತಿಯಾದ ಶ್ರೀರಾಮಚಂದ್ರನ ಮಾತು ಸರ್ವ ವಿಧದಿಂದಲೂ ಸಮರ್ಪಕವಾದುದೆಂದು ಶ್ಲಾಘಿಸಿದರು. ಇಷ್ಟರಲ್ಲಿ ಅದೇನು ಕಾರಣವೋ ಏನೋ, ಭರತನ ಮನಸ್ಸಿಗೂ ಮತ್ತು ಸರ್ವ ಸಭಿಕರ ಮನಸ್ಸಿಗೂ ಈ ಅಭಿಪ್ರಾಯದಿಂದಲೇ ಸಂತುಷ್ಟಿಯುಂಟಾ ಯಿತು. ಶ್ರೀರಾಮಚಂದ್ರನು ತಮ್ಮನ್ನು ನಾಲ್ಕು ದಿವಸ ಇಟ್ಟು ಕೊಂಡು ತೋರಿಸಿದ ಪ್ರೇಮದಿಂದ ಸರ್ವರಿಗೂ ತಾವು ಎಲ್ಲಿದ್ದರೂ ರಾಮನ ಸಮೀಪಸ್ಥರೇ ಎಂಬ ಭಾವನೆಯುಂಟಾಯಿತು. ಭರತನಿ ಗಾದರೋ ಶ್ರೀರಾಮನ ಪ್ರಸನ್ನತೆಯೇ ಅಷ್ಟೈಶ್ವರ್ಯವೆಂಬ ಭಾವನೆ ಉಂಟಾಯಿತು. ಆಗ ಅವನು "ದೇವ, ನಿನ್ನ ಆಜ್ಞೆಯೇ ನನಗೆ

ಮಹಾಪ್ರಸಾದ; ಆದರೆ ಹದಿನಾಲ್ಕು ವರ್ಷಗಳು ನಾನು ನಿನ್ನನ್ನಗಲಿರಬೇಕಾದ್ದು ಮಾತ್ರ ನನ್ನ ಮನಸ್ಸಿಗೆ ತಳಮಳವನ್ನುಂಟು ಮಾಡಿದೆ. ನನ್ನ ಮನಸ್ಸನ್ನು ಸಮಾಧಾನಗೊಳಿಸುವದಕ್ಕೆ ನೀನೇ ಸಮರ್ಥನು'' ಎಂದು ಅಂಗಲಾಚಿಕೊಂಡನು. ಇದನ್ನು ಕೇಳಿ ಬಹು ಕನಿಕರವುಳ್ಳವನಾಗಿ ಶ್ರೀರಾಮನು ತನ್ನ ಪ್ರತಿನಿಧಿಯಾಗಿ ತನ್ನ ಪಾದುಕೆಗಳನ್ನು ಭರತನಿಗೆ ಕೊಟ್ಟನು. ಅದನ್ನು ಮಹಾಪ್ರಸಾದವೆಂದು ಭರತನು ತಲೆಯ ಮೇಲೆ ಹೊತ್ತುಕೊಂಡು ಅದರ ಸಾನ್ನಿಧ್ಯವನ್ನೇ ಶ್ರೀರಾಮನ ಸಾಕ್ಷಾತ್ಸಾನ್ನಿಧ್ಯವಾಗಿ ತಿಳಿದು ಸಾಕ್ಷಾದ್ರಾಮನೇ ತನ್ನೊಡನೆ ಅಯೋಧ್ಯೆಗೆ ಬಂದಂತಾಯಿತೆಂದು ಭಾವಿಸಿ ಅತ್ಯಂತಸಂತುಷ್ಟನಾದನು. ಶ್ರೀರಾಮಚಂದ್ರನನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಬೇಕೆಂದಲ್ಲವೆ ಭರತನು ಬಂದದ್ದು? ಭರತನು ಇಲ್ಲಿಗೆ ಬರುವದಕ್ಕೆ ಮೊದಲೂ ರಾಮನು ಅಯೋಧ್ಯೆಯಲ್ಲಿರಲಿಲ್ಲ. ಭರತನು ಈಗ ಹಿಂದಿರುಗುವಾಗಲೂ ರಾಮನು ಅಯೋಧ್ಯೆಗೆ ಬರುವದಿಲ್ಲ; ಆದರೂ ಕೂಡ ಭರತನ ಮನಸ್ಸಿನ ಸ್ಥಿತಿಯಲ್ಲಿ ಆಗಿರುವ ಹೆಚ್ಚುಕಡಿಮೆಯಿಂದ ಈ ಭೇದವು ತೋರಿಬರುವದು. ನಿಜವಾಗಿ ಪರಮಾತ್ಮನು ಒಂದು ಕಡೆ ಇರುವನೆಂದೂ ಒಂದು ಕಡೆ ಇಲ್ಲವೆಂದೂ ಹೇಳುವದಕ್ಕೆ ಬರುವದಿಲ್ಲ. ಅವನು ಯಾವಾಗಲೂ ಎಲ್ಲೆಲ್ಲಿಯೂ ತುಂಬಿರುವನು. ಹೀಗಿರುವದು ಅವನ ನಿರ್ಗುಣಸ್ವರೂಪ. ಜನರಿಗೆ ಇದಕ್ಕಿಂತಲೂ ಸಗುಣಸ್ವರೂಪದಲ್ಲಿ ಪ್ರೀತಿ ಹೆಚ್ಚು. ಭಕ್ತರು ಸಗುಣಸಾಕ್ಷಾತ್ಕಾರವನ್ನು ಬಹುಮಾನಿಸುವರು. ಒಂದು ಕಡೆ ಅವನಿರುವನೆಂಬ ಭಾವನೆಯೊಂದು ಬಂದುಬಿಟ್ಟರೆ ಅದನ್ನೇ ಅವನ ಸಾನ್ನಿಧ್ಯವೆಂದು ಭಾವಿಸಿ ಆ ಭಕ್ತನು ನಿರಾತಂಕನಾಗಿರುವನು. ಇಲ್ಲಿ ಶ್ರೀರಾಮಚಂದ್ರನ ಕೋಮಲವಾದ ಚರಣಗಳ ಸಂಸ್ಪರ್ಶದಿಂದ ಪವಿತ್ರವಾದ ಪಾದುಕೆಯೇ ದೊರೆತದ್ದರಿಂದ ಅಲ್ಲಿ ಭರತನು ತನ್ನ ಉಪಾಸ್ಯಮೂರ್ತಿಯನ್ನು ಭಾವಿಸುವದಕ್ಕೆ ಅನುಕೂಲವಾಯಿತು. ಪರಮಾತ್ಮಸ್ವರೂಪವನ್ನು ಉಪಾಸನೆ ಮಾಡುವದಕ್ಕೆ ಮನಸ್ಸಿನ ಭಾವನೆಯೇ ಕಾರಣ. ಪರಮಾತ್ಮನು ಎಲ್ಲಾ ವಸ್ತುಗಳಲ್ಲಿಯೂ ಇರುವದರಿಂದ ಅವನನ್ನು ಎಲ್ಲಿ ಉಪಾಸನೆ

ಮಾಡಿದರೂ ಸಿದ್ಧಿಯಾಗುವದು. ಇಲ್ಲಿ ಭರತನಿಗೆ ತನ್ನ ಭಾವನೆಗೆ ಅನುಕೂಲವಾದ ಉಪಕರಣವು ದೊರೆತದ್ದರಿಂದ ಆವನಿಗೆ ಇಷ್ಟಕ್ಕೇ ಸಮಾಧಾನವಾಯಿತು. ಮಗನ ಸಮಾಧಾನವನ್ನು ನೋಡಿ ಕೈಕೆ ಯಿಗೂ ಪರಮಾನಂದವಾಯಿತು. ಅದರಂತೆ ಅಯೋಧ್ಯೆಯಲ್ಲಿದ್ದು ಕೊಂಡೇ ರಾಮಪಾದುಕಾದರ್ಶನದಿಂದ ತಾವೆಲ್ಲರೂ ಧನ್ಯರಾಗಬಹು ದೆಂದು ಪುರಜನರೆಲ್ಲರೂ ಹರ್ಷಿತರಾದರು. ತಾಯಿಯರಿಗೆ ಇಷ್ಟ ರಿಂದ ಹೇಗೆ ತೃಪ್ತಿಯಾದೀತು? ಸಾಮಾನ್ಯವಾಗಿ ಸ್ತ್ರೀಮಾತ್ರಕ್ಕೇ ಇಷ್ಟರಿಂದ ತೃಪ್ತಿಯಾಗುವದಿಲ್ಲ. ಈ ಸೃಷ್ಟಿಯೆಂಬ ದೇಹಕ್ಕೆ ಸ್ತ್ರೀ ಯರು ಹೃದಯದ ಹಾಗೆ, ಪುರುಷರು ಮೆದುಳಿನ ಹಾಗೆ. ಆದ್ದರಿಂದ ಪುರುಷರಷ್ಟು ವಿಚಾರಶಕ್ತಿ ಸ್ತ್ರೀಯರಿಗಿಲ್ಲ. ಸ್ತ್ರೀಯರಷ್ಟು ಮರುಕ ಪುರುಷರಿಗಿಲ್ಲ. ಸ್ತ್ರೀಸಾಮಾನ್ಯಕ್ಕೇ ಹೀಗಿರುವಾಗ ತಾಯಿಯರಿಗೆ ಇಷ್ಟು ಮಾತ್ರದಿಂದ ಹೇಗೆ ತೃಪ್ತಿಯಾದೀತು? ಉಪಾಯಾಂತರ ವಿಲ್ಲದ್ದರಿಂದ ಇಲ್ಲಿಯವರಿಗೆ ಬಂದು ಕಣ್ಣಾರೆ ನೋಡಿದ್ದೇ ದೊಡ್ಡ ಲಾಭವೆಂದು ಹೇಗೋ ತಮ್ಮಲ್ಲಿ ತಾವೇ ಸಮಾಧಾನಮಾಡಿಕೊಂಡರು. ಸರ್ವಾಂತರ್ಯಾಮಿಯಾದ ಶ್ರೀರಾಮನ ಪ್ರಭಾವದಿಂದ ಹೇಗೋ ಅವರ ಮನಸ್ಸುಗಳೆಲ್ಲಾ ಅಷ್ಟಕ್ಕೇ ಸಮಾಧಾನವನ್ನು ಪಡೆದವೇ ಹೊರತು ಅವರ ಪೂರ್ವಸ್ಥಿತಿಯನ್ನು ನೆನಸಿಕೊಂಡರೆ ಇಷ್ಟಕ್ಕೆಂದಿಗೂ ಅವರು ತೃಪ್ತರಾಗುವ ಲಕ್ಷಣನೆಳ್ಳಷ್ಟೂ ಇರಲಿಲ್ಲ.

ಆಮೇಲೆ ಅಯೋಧ್ಯೆಗೆ ಎಲ್ಲರ ಪ್ರಯಾಣವೂ ಸಿದ್ಧವಾಯಿತು. ಎಲ್ಲರೂ ಒಬ್ಬರಿಗೊಬ್ಬರು ಹೋಗಿಬರುತ್ತೇನೆಂದು ಹೇಳಿದ್ದಾಯಿತು. ಶ್ರೀರಾಮಚಂದ್ರನು ಪ್ರತಿಯೊಬ್ಬರಿಗೂ ಹಿತವಾಗುವಂತೆ ಮಾತ ನಾಡಿ ಎಲ್ಲರನ್ನೂ ಸಾಗಕಳುಹಿಸುವದಕ್ಕೆ ಬಂದನು. ರಾಮನ ಸಾನ್ನಿಧ್ಯವನ್ನು ಬಿಟ್ಟು ದೂರವಾಗುವದು ಯಾರ ಮನಸ್ಸಿಗೂ ಒಪ್ಪಲಿಲ್ಲವಾದ್ದರಿಂದ ಎಲ್ಲರ ಕಾಲುಗಳೂ ಹಿಂದಕ್ಕೆಳೆಯುತ್ತಿ ದ್ದವು. ಬರೀ ಜನರು ಮಾತ್ರವೇ ಅಲ್ಲ; ಆನೆ, ಕುದುರೆ, ಎತ್ತು– ಮೊದಲಾದ ಪಶುಗಳು ಕೂಡ ಮುಂದೆ ಹೆಜ್ಜೆ ಇಡುವದಕ್ಕೆ ಮನ ಸ್ಸಿಲ್ಲದವುಗಳ ಹಾಗೆ ಮೆಲ್ಲಮೆಲ್ಲಗೆ ಸಾಗುತ್ತಿದ್ದವು. ಶ್ರೀರಾಮನು

ಮಹಾಸಾಗರದ ಹಾಗೆ, ಉಳಿದ ಜನರೆಲ್ಲಾ ಆ ಸಾಗರದ ಅಲೆ
ಗಳ ಹಾಗೆ. ಅಲೆಗಳು ಸಮುದ್ರವನ್ನು ಬಿಟ್ಟಿರಲಾರದಂತೆ ಅಯೋ
ಧ್ಯೆಯವರೆಲ್ಲರಿಗೂ ರಾಮನನ್ನು ಬಿಟ್ಟು ಹೋಗುವದಕ್ಕೆ ಉತ್ಸಾಹ
ಉಂಟಾಗಲಿಲ್ಲ. ಕೆಲವು ದೂರದವರಿಗೆ ಸಾಗಕಳುಹಿಸಿ ಆ ಜನಮಂಡ
ಲಿಯೆಲ್ಲಾ ಮುಂದೆಮುಂದೆ ಸಾಗುವದನ್ನು ನೋಡುತ್ತ ಸೀತಾ
ರಾಮಲಕ್ಷ್ಮಣರು ವಟವೃಕ್ಷದ ನೆರಳಲ್ಲಿ ಕುಳಿತು ಸ್ವಜನರ ವಿಯೋಗ
ಕ್ಕಾಗಿ ವಿಹ್ವಲರಾದ್ದಲ್ಲದೆ ಭರತನ ಪ್ರೇಮಾತಿಶಯವನ್ನು ಬಹುಪರಿ
ಯಾಗಿ ಹಾಡಿ ಹೊಗಳಿದರು. ಶ್ರೀರಾಮಮೂರ್ತಿಯ ಮೇಲಿನ
ಪ್ರೇಮದಿಂದ ಪೂರ್ಣರಾದ ಆ ಜನರ ಅಗಲಿಕೆಯಿಂದ ಆ ವನಪ್ರದೇ
ಶದ ಪಕ್ಷಿಗಳೂ ಮೃಗಗಳೂ ಜಲಾಶಯಗಳೂ ಕೂಡ ಮ್ಲಾನವಾ
ದವು. ಇತ್ತ ಮುನಿಜನರೂ ಬ್ರಾಹ್ಮಣರೂ ವಸಿಷ್ಠರೂ ಭರತನೂ
ಶ್ರೀರಾಮವಿರಹದಿಂದ ವ್ಯಾಕುಲಚಿತ್ತರಾಗಿ ಶ್ರೀರಾಮನ ಪಾದಗ
ಳನ್ನೇ ಮನಸ್ಸಿನಲ್ಲಿ ಚಿಂತನೆಮಾಡುತ್ತ ಮುಂದೆ ಹೊರಟು ನಾಲ್ಕು
ದಿವಸಗಳಲ್ಲಿಯೇ ಅಯೋಧ್ಯಾಪಟ್ಟಣವನ್ನು ಸೇರಿದರು.

ಊರಿಗೆ ಹೋಗುತ್ತಲೇ ಭರತನು ವಸಿಷ್ಠರಿಗೆ ಸಾಷ್ಟಾಂಗ
ಪ್ರಣಾಮವನ್ನು ಮಾಡಿ ತಾನೊಂದು ನಿಯಮವ್ರತದಿಂದ ಇರುವ
ದಕ್ಕೆ ಅಪ್ಪಣೆಯನ್ನು ಕೊಡಬೇಕೆಂದು ಬೇಡಿಕೊಂಡನು. ಅಗತ್ಯವಾಗಿ
ಆಗಲೆಂದು ವಸಿಷ್ಠರು ಮಹದಾಶೀರ್ವಾದವನ್ನು ಮಾಡಿ ಭರತನಿಗೆ
ಉಪದೇಶವನ್ನು ಮಾಡಿದರು. ಭರತನು ಸುಪ್ರಸಿದ್ಧರಾದ ಜ್ಯೋತಿ
ಷ್ಕರಿಂದ ಸುಮುಹೂರ್ತವನ್ನು ಗೊತ್ತುಮಾಡಿಸಿ ಆ ಮುಹೂರ್ತ
ವನ್ನು ಸಾಧಿಸಿ ಶ್ರೀರಾಮಪಾದುಕೆಗಳನ್ನು ಅನನ್ಯಭಾವದಿಂದ ಸಿಂಹಾ
ಸನದ ಮೇಲೆ ಸ್ಥಾಪನೆಮಾಡಿದನು. ಅಂದಿನಿಂದ ಅವನು ತಾಯಿ
ಯರ ಮತ್ತು ಗುರುಗಳ ಆಜ್ಞೆಯನ್ನು ಪಡೆದು ನಂದಿಗ್ರಾಮವೆಂಬ
ಸ್ಥಳದಲ್ಲಿ ಒಂದು ಪರ್ಣಕುಟೀರವನ್ನು ಮಾಡಿಕೊಂಡು ಅಲ್ಲಿ ಧರ್ಮ
ಧುರಂಧರನಾಗಿರುವದಕ್ಕೆ ಮೊದಲುಮಾಡಿದನು. ಅಂದಿನಿಂದ
ಅವನು ಜಟೆಯನ್ನು ಬೆಳೆಸಿದನು; ಮುನಿಜನರಿಗೆ ಯೋಗ್ಯವಾದ
ವಸ್ತ್ರಗಳನ್ನು ಧರಿಸಿದನು; ದರ್ಭಾಸನವನ್ನು ಹಾಸಿಗೆಯಾಗಿ ಮಾಡಿ

ಕೊಂಡನು; ಉತ್ತಮವಾದ ಭಕ್ಷ್ಯಭೋಜ್ಯಗಳನ್ನೆಲ್ಲಾ ತ್ಯಜಿಸಿಬಿಟ್ಟನು. ಈ ರೀತಿಯಾಗಿ ವಿರಕ್ತನಾಗಿದ್ದುಕೊಂಡು ಯಾವಾಗಲೂ ರಾಮನಾಮಸ್ಮರಣೆಯನ್ನು ಮಾಡುತ್ತ ರಾಮಭಕ್ತಿಪರಾಯಣನಾಗಿ ಉತ್ಕಟವಾದ ತಪಶ್ಚರ್ಯೆಯನ್ನು ನಾಗಿಸಿದನು. ತಪಶ್ಚರ್ಯೆಯು ಮೂರು ಬಗೆಯಾಗಿರುವದು. ದೇವತೆಗಳನ್ನೂ ಬ್ರಾಹ್ಮಣರನ್ನೂ ಗುರುಗಳನ್ನೂ ಪೂಜೆಮಾಡುವದೂ ಶುಚಿಯಾಗಿರುವದೂ ಬ್ರಹ್ಮಚರ್ಯೆಯಲ್ಲಿರುವದೂ ಯಾವ ಪ್ರಾಣಿಗೂ ಹಿಂಸೆಯನ್ನು ಮಾಡದೆ ಇರುವದೂ ಇವು ಶರೀರದಿಂದಾಗುವ ತಪಸ್ಸು. ಯಾರ ಮನಸ್ಸೂ ನೋಯಿಸಿದಂಥ ಮಾತಾಡುವದೂ ಇದ್ದದ್ದಿದ್ದ ಹಾಗೆಯೂ ಕಿವಿಗೂ ಇಂಪಾಗಿಯೂ ಶ್ರೇಯಸ್ಕರವೂ ಆಗಿಯೂ ಇರುವ ಹಾಗೆ ಹೇಳುವದೂ ಪುರಾಣೇತಿಹಾಸಗಳನ್ನು ಓದುವದೂ ಇವು ವಾಕ್ಕಿನಿಂದಾಗುವ ತಪಸ್ಸು. ಮನಸ್ಸನ್ನು ಪ್ರಸನ್ನವಾಗಿಟ್ಟುಕೊಂಡು ವಿಷಯಗಳ ಕಡೆಗೆ ಹೋಗಗೊಡದೆ ಯಾವಾಗಲೂ ಪರಮಾತ್ಮಚಿಂತನೆಯಲ್ಲಿ ಇರುವದು ಮನಸ್ಸಿನಿಂದಾಗುವ ತಪಸ್ಸು. ಭರತನು ಈ ಮೂರು ತಪಸ್ಸನ್ನೂ ಸಾಂಗವಾಗಿ ಡೆಸುವದಕ್ಕೆ ಬದ್ಧಕಂಕಣನಾದನು. ಸಿಂಹಾಸನದ ಮೇಲೆ ಸ್ಥಾಪನೆಮಾಡಿದ ರಾಮಪಾದುಕೆಯನ್ನೇ ಸಾಕ್ಷಾದ್ರಾಮಮೂರ್ತಿಯೆಂದು ಭಾವಿಸಿ ಪ್ರತಿಯೊಂದು ಆಗುಹೋಗುಗಳನ್ನೂ ಪಾದುಕೆಗಳಿಗೆ ನಿವೇದನಮಾಡುತ್ತ ತಾನು ಅದರ ಆಜ್ಞಾಧಾರಕನಾಗಿ ವರ್ತಿಸುತ್ತಿದ್ದನು. ನಿಜವಾಗಿ ಯಾರಿಗೆ ಪರಮಾತ್ಮಪ್ರಾಪ್ತಿಯಾಗಬೇಕೋ ಅವರು ಹೀಗೆ ತಪಶ್ಚರ್ಯೆಗಳನ್ನು ಮಾಡಲೇ ಬೇಕು. ವೈರಾಗ್ಯವುಂಟಾದ ಹೊರತು ಯಾವ ತಪಶ್ಚರ್ಯೆಯೂ ಆಗುವದಿಲ್ಲ. ವಿಷಯಸುಖವೂ ಪರಮಾತ್ಮಪ್ರಾಪ್ತಿಯೂ ಎರಡೂ ಬೇಕೆಂದರೆ ಆಗಲಾರದು. ಅವೆರಡು ಒಂದಕ್ಕೊಂದು ವಿರುದ್ಧವಾದವುಗಳು. **ಅಕ್ಕಿಯ ಮೇಲಣ ಆಸೆ, ನೆಂಟರ ಮೇಲಣ ಹಿತ**– ಎರಡನ್ನೂ ಏಕಕಾಲದಲ್ಲಿ ಹೇಗೆ ಸಾಧಿಸುವದಕ್ಕಾದೀತು? ಹೀಗೆ ತಪಶ್ಚರ್ಯೆಯಲ್ಲಿ ಮನಸ್ಸನ್ನು ನೆಲೆಗೊಳಿಸುವದರಿಂದ ನಿಜವಾದ ಪರಮಾತ್ಮಪ್ರಾಪ್ತಿಯೂ ಇನ್ನೂ ದೂರದಲ್ಲಿದ್ದರೂ ಕೂಡ ಸಾಂಸಾರಿಕದುಃಖಗಳು ಅವನ

ಮನಸ್ಸನ್ನು ದುರ್ಬಲವಾಗಿ ಮಾಡುವದಕ್ಕೆ ಅವಕಾಶವಿರುವದಿಲ್ಲ. ಅವನ ಮನಸ್ಸು ಪರಮಾತ್ಮನ ವಿಚಾರದಲ್ಲಿಯೇ ಇರುವದರಿಂದ ಅವನಿಗೆ ಪರಮಾತ್ಮಪ್ರಾಪ್ತಿಯಾದ ಹಾಗೆಯೇ ತೋರುತ್ತಿರುವದು. ನಿಜವಾದ ರಾಮನ ಸಾನ್ನಿಧ್ಯವು ದೂರದಲ್ಲಿದ್ದರೂ ತತ್ಪರವಾದ ತಪಸ್ಸಿನ ಪ್ರಭಾವದಿಂದ ಭರತನಿಗೆ ರಾಮನ ಸಾನ್ನಿಧ್ಯವಿದ್ದಂತೆಯೇ ಆಯಿತಲ್ಲದೆ ರಾಜಕೀಯವಾದ ಅಥವಾ ಬೇರೆಯಾದ ಯಾವ ದುಃಖವೂ ಅವನ ಮೇಲೆ ಕೈಮಾಡಲಿಲ್ಲ. ಅವನಿಗೆ ಒಂದು ದಿನವೂ ಅಥವಾ ಒಂದು ವರ್ಷವೂ ಕ್ಷಣದಂತೆ ತೋರುತ್ತ ಬಂತು.

ಭರತನ ಆಚಾರ, ವಿಚಾರ, ವ್ಯವಹಾರ, ಭಕ್ತಿ, ವಿರಕ್ತಿ—ಮುಂತಾದವುಗಳನ್ನು ವರ್ಣನೆಮಾಡುವದು ಮಹಾಮಹಾಕವಿಗಳಿಂದ ಕೂಡ ಆಗಲಿಲ್ಲ. ಅಷ್ಟೇ ಏಕೆ? ಆದಿಶೇಷನಿಗೂ ಗಣಪತಿಗೂ ಮತ್ತು ಸರಸ್ವತಿಗೂ ಕೂಡ ಅದು ಸಾಧ್ಯವಾಗಲಿಲ್ಲ. ಭರತನ ಸ್ಥಿತಿಯನ್ನು ಒಂದು ಸಂಗ್ರಹವಾಕ್ಯದಲ್ಲಿ ಹೇಳಬೇಕಾದರೆ ದೇಹದಲ್ಲಿ ರೋಮಾಂಚ; ಹೃದಯದಲ್ಲಿ ಸೀತಾರಾಮಮೂರ್ತಿ; ಜಿಹ್ವಾಗ್ರದಲ್ಲಿ ರಾಮನಾಮ; ಕಣ್ಣುಗಳಲ್ಲಿ ಆನಂದಾಶ್ರು. ಭರತನ ಈ ಸ್ಥಿತಿಯನ್ನು ಕೇಳಿ ಮಹಾಮಹಾಮುನಿಗಳು ಕೂಡ ತಮ್ಮಲ್ಲಿರುವ ನ್ಯೂನತೆಗಳನ್ನು ನೆನಸಿಕೊಂಡು ತಲೆಯನ್ನು ತಗ್ಗಿಸಿದರು.

## ಮಾರುತಿಯ ಪರಿಚಯ ಒದಗಿದ್ದು

ಭರತನು ಹೀಗೆ ವ್ರತಸ್ಥನಾಗಿ ರಾಮಚಿಂತಾಪರಾಯಣನಾಗಿ ಕುಳಿತಿರುವಾಗ ಅವನಿದ್ದ ಪ್ರದೇಶದಲ್ಲಿ ಒಂದು ದಿನ ಒಮ್ಮೆಗೇ ಒಂದು ದೊಡ್ಡ ನೆರಳು ಬಿತ್ತು. ಅದೇನಿರಬಹುದೆಂದು ಅವನು ಕತ್ತೆತ್ತಿ ನೋಡಲಾಗಿ ಮೇಲೆ ದೂರದಲ್ಲಿ ಏನೋ ಒಂದು ದೊಡ್ಡ ದಾದಾಕಾರವು ಕಾಣಿಸಿತು. ಅವನೊಬ್ಬ ಲೋಕಕಂಟಕನಾದ ರಾಕ್ಷಸನಿರಬಹುದೆಂದು ಭರತನಿಗೆ ಸಂಶಯವುಂಟಾಯಿತು. ಒಡನೆ ಅವನು ಅವನನ್ನು ನಿಗ್ರಹಿಸಬೇಕೆಂದು ಒಂದು ಬಾಣವನ್ನು ಧನುಸ್ಸಿಗೆ ಹೂಡಿ ಅದರ ಹೆದೆಯನ್ನು ಕಿವಿಯವರೆಗೂ ಸೆಳೆದು ಬಿಟ್ಟನು. ಆ ಬಾಣವು ತಾಕುತ್ತಲೇ ಆಕಾಶದಲ್ಲಿ ಹೋಗುತ್ತಿದ್ದ ಆ ಪ್ರಾಣಿಯು

"ರಾಮ ರಾಮ" ಎನ್ನುತ್ತ ದೂರದಲ್ಲಿ ಧೊಪ್ಪನೆ ಕೆಳಗೆ ಬಿತ್ತು. "ರಾಮ ರಾಮ" ಎಂಬ ಶಬ್ದಗಳು ಕಿವಿಗೆ ಬೀಳುತ್ತಲೇ ಭರತನಿಗೆ ತನ್ನ ಮೇಲೆ ಅಮೃತದ ಸೋನೆ ಸುರಿದಂತಾಯಿತು. ಈ ಶಬ್ದದಿಂದ ಉಂಟಾದ ಆನಂದದ ಜೊತೆಗೆ, "ರಾಮನ ಮೇಲೆ ವಿಶ್ವಾಸವುಳ್ಳ ಪ್ರಾಣಿಯನ್ನು ಕೊಂದ ಪಾಪಕ್ಕೆ ಗುರಿಯಾದೆನಲ್ಲ!" ಎಂದು ಭರತನಿಗೆ ತಳಮಳವೂ ಉಂಟಾಯಿತು. ಒಡನೆ ಅವನು ಓಡಿ ಹೋಗಿ ನೋಡ ಲಾಗಿ ಆ ಪ್ರಾಣಿಯು ಒಂದು ಬೆಟ್ಟವನ್ನು ಹೊತ್ತಿದ್ದ ವಾನರ ನಾಗಿತ್ತು. ಅವನಿಗೆ ಮೊದಲಿದ್ದ ಭಯದ ಜೊತೆಗೆ ಈಗ ಆಶ್ಚರ್ಯ ವೂ ಸೇರಿಕೊಂಡಿತು. ಒಂದು ಕೋತಿಯು ಬೆಟ್ಟವನ್ನು ಹೊರುವ ದೆಂಬುದೊಂದಸಂಭವ. ಅದನ್ನು ಹೊತ್ತುಕೊಂಡು ಆಕಾಶದಲ್ಲಿ ಹಾರುವದೆಂಬುದು ಇನ್ನೂ ಅಸಂಭವ. ಈ ಆಶ್ಚರ್ಯವನ್ನೊಂದು ಮೂಲೆಯಲ್ಲಿಟ್ಟುಕೊಂಡು ರಾಮನಾಮೋಚ್ಚಾರವನ್ನು ಮಾಡುವ ಪ್ರಾಣಿಯು ಸರ್ವವಿಧದಲ್ಲಿಯೂ ಪೂಜ್ಯವೆಂದು ಭಾವಿಸಿ ಆ ಪ್ರಾಣಿಗೆ ಗಾಳಿಯನ್ನು ಬೀಸಿ ಉಪಚಾರವನ್ನು ಮಾಡಿದನು. ಆಪ್ರಾಣಿಯು ಮೂರ್ಛೆಯಿಂದ ಎಚ್ಚೆತ್ತು ಪಿಳಿ ಪಿಳಿ ಕಣ್ಣು ಬಿಡುವದರೊಳಗೆ ಭರತನಿಗೆ ಎದೆ ಹೊಡೆದುಕೊಳ್ಳುವದಕ್ಕಾರಂಭವಾಯಿತು. ಕಣ್ಣು ಗಳಿಂದ ದಡದಡನೆ ನೀರು ಸುರಿಯುವದಕ್ಕೆ ಮೊದಲಾಯಿತು. ತನಗೆ ರಾಮಪಾದಾರವಿಂದದಲ್ಲಿ ತ್ರಿಕರಣಪೂರ್ವಕವಾದ ಭಕ್ತಿ ಇದ್ದರೆ ಮತ್ತು ತನ್ನ ಮೇಲೆ ನಿಜವಾಗಿ ಶ್ರೀರಾಮಚಂದ್ರನ ಅನುಗ್ರಹ ವಿದ್ದರೆ ಈ ವಾನರನು ಎಚ್ಚೆತ್ತುಕೊಳ್ಳಲೆಂದೂ ಭಯಭಕ್ತಿಯುಕ್ತ ನಾಗಿ ಹರಿಕೆಯನ್ನು ಹೊತ್ತನು. ಭರತನ ಬಾಯಿಂದ ಬಂದ ಶ್ರೀ ರಾಮನಾಮವನ್ನು ಕೇಳಿದೊಡನೆ ಆ ವಾನರನು ಗಾಢನಿದ್ರೆಯಿಂದೆ ದ್ದವನಂತೆ ಎಚ್ಚೆತ್ತು ಕಣ್ಣು ಬಿಟ್ಟನು. ಆಕ್ಷಣದಲ್ಲಿಯೇ ಭರತನು ವಾನರನನ್ನು ಪ್ರೇಮಾತಿಶಯದಿಂದ ಬಾಚಿ ತಬ್ಬಿಕೊಂಡು ಅವನನ್ನು ತನ್ನ ಆನಂದಾಶ್ರುವಿನಲ್ಲಿ ಮುಳುಗಿಸಿ ಬಿಟ್ಟನು. ವಾನರಮುಖದಿಂದ ಅಖಂಡವಾಗಿ ರಾಮನಾಮವು ಹೊರಡುತ್ತಿತ್ತು. "ರಾಮನ ವೃತ್ತಾಂತವು ನಿನಗೇನಾದರೂ ತಿಳಿದಿದೆಯೇ? ನೀನು ಯಾರು?

ರಾಮಾಗಮನವನ್ನೇ ನಿರೀಕ್ಷಿಸುತ್ತಿರುವ ಅವನ ಸೋದರನಾದ ನನಗೆ ಅವನ ಯೋಗಕ್ಷೇಮವನ್ನು ಹೇಳು" ಎಂದು ಭರತನು ಪ್ರಶ್ನೆ ಮಾಡಲು ಹನುಮಂತನು ತನ್ನ ಹೆಸರನ್ನೂ ರಾವಣನು ಸೀತೆಯನ್ನು ಕದ್ದೊಯ್ದುದ್ದನ್ನೂ ತನಗೆ ರಾಮಸೇವಾಪದವಿ ದೊರೆತದ್ದನ್ನೂ ರಾವಣನೊಡನೆ ಯುದ್ಧವು ನಡೆಯುತ್ತಿರುವದನ್ನೂ ಲಕ್ಷ್ಮಣನ ಉಜ್ಜೀವನಕ್ಕಾಗಿ ಸಂಜೀವನೌಷಧಿಯುಳ್ಳ ಪರ್ವತವನ್ನು ಒಯ್ಯುತ್ತಿರುವದನ್ನೂ ಭರತನಿಗೆ ಸಂಕ್ಷೇಪವಾಗಿ ಹೇಳಿದನು. ಅದನ್ನೆಲ್ಲಾ ಕೇಳಿ "ಈ ಸಮಯದಲ್ಲಿ ನಾನು ರಾಮನಿಗೆ ಯಾವ ಸಹಾಯವನ್ನೂ ಮಾಡಲಾರೆನಲ್ಲಾ" ಎಂದು ಭರತನಿಗೆ ಅತ್ಯಂತ ದುಃಖವಾಯಿತು. ಆದರೂ ಯಾವದೊಂದು ಸುದ್ದಿಯಾದರೂ ಇಲ್ಲದೆ ಪೇಚಾಡುತ್ತಿದ್ದ ಸಮಯದಲ್ಲಿ ತನಗೆ ಜೀವದಾನವನ್ನು ಮಾಡಿದ ಈ ಹನುಮಂತನೇ ಪ್ರತಿನಿಧಿಯೆಂದು ಭಾವಿಸಿ ಅವನನ್ನು ಬಗೆಬಗೆಯಾಗಿ ಉಪಚರಿಸಿ ಮಹಾರ್ಹವಾದ ಆಹಾರದ್ರವ್ಯಗಳನ್ನು ತಂದು ಹನುಮಂತನಿಗೆ ಸಮರ್ಪಣೆಮಾಡಿದನು. ಆಗ ರಾಮಕಾರ್ಯವು ಅತಿಶೀಘ್ರವಾಗಿ ನಡೆಯಬೇಕಾಗಿರುವದರಿಂದ ಅದನ್ನು ಸ್ವೀಕರಿಸುವದಕ್ಕೂ ಹೆಚ್ಚು ಮಾತಾಡುವದಕ್ಕೂ ಕೂಡ ಅವಕಾಶವಿಲ್ಲವೆಂದು ಹನುಮಂತನು ಪ್ರಯಾಣಸನ್ನದ್ಧನಾದನು. ತಾನು ಈಗ ಉಂಟುಮಾಡಿದ ವಿಘ್ನವನ್ನು ಮರೆಸುವಷ್ಟಾದರೂ ಸಹಾಯ ಮಾಡಬೇಕೆಂದು ಮನಸ್ಸು ಮಾಡಿ ಆಗ ಭರತನು ಹನುಮಂತನನ್ನು ಕುರಿತು "ಅಪ್ಪಾ, ಶ್ರೀರಾಮನಿಗೆ ನಾನಂತೂ ಯಾವ ಸೇವೆಯನ್ನೂ ಮಾಡಲಾರೆ. ಮಾಡುವಂಥ ನಿನಗೂ ಅಡ್ಡ ಬಂದದ್ದು ನನ್ನ ತಪ್ಪಾಯಿತು. ನಡೆದು ಹೋದದ್ದಕ್ಕೆ ಯತ್ನವಿಲ್ಲ. ಈಗ ನೀನು ಈ ಪರ್ವತದೊಡನೆ ನನ್ನ ಬಾಣದ ಮೇಲೆ ಕುಳಿತುಕೊ; ತೀವ್ರವೇಗದಿಂದ ನಿನ್ನನ್ನು ಅಲ್ಲಿಗೆ ಮುಟ್ಟಿಸುತ್ತೇನೆ" ಎಂದು ಹೇಳಿದನು. ಅದಕ್ಕವನು ನಿನ್ನನುಗ್ರಹದಿಂದ ನಾನು ಆ ಬಾಣವೇಗಕ್ಕಿಂತಲೂ ಮುಂಚೆಯೇ ಹೋಗಬಲ್ಲೆನೆಂದು ಭರತನ ಆಜ್ಞೆಯನ್ನು ತೆಗೆದುಕೊಂಡು ಮುಂದಿನ ದಾರಿಯನ್ನು ಹಿಡಿದನು.

ವಾನರ ಎಂದರೆ ಸ್ವಲ್ಪ ಹೆಚ್ಚು ಕಡಿಮೆ ಮನುಷ್ಯರಂತೆ ಇರುವ ಪ್ರಾಣಿ ಎಂದರ್ಥವಾಗುವದು. ಹೇಗೆ ಇದ್ದರೂ ಬೆಟ್ಟವನ್ನು ಹೊರುವದೆಂಬುದೂ ಅದನ್ನು ಹೊತ್ತುಕೊಂಡು ಹಾರುವದೆಂಬುದೂ ಯಾರಿಗೂ ಸಾಧ್ಯವಿಷಯವಾಗಿ ತೋರುವದಿಲ್ಲ. ನಮಗೆಲ್ಲರಿಗೂ ಹಾಗೆ ತೋರುವ ಮಾತ್ರದಿಂದಲೇ ಹಾಗೆ ನಡೆದಿರಲೇ ಆರದೆಂದು ಹೇಳುವದು ಮೂಢತನ. ಸಣ್ಣದೊಂದು ದೇಹವನ್ನು ನಾವೆಂದು ಅಭಿಮಾನ ಮಾಡಿಕೊಳ್ಳುವದರಿಂದ ನಮಗೆ ಅದಕ್ಕೆ ತಕ್ಕಷ್ಟೇ ಬಲವಿರುವದು. ಈ ಸೃಷ್ಟಿಯೇ ನಮ್ಮ ದೇಹವೆಂದು ನಾವು ನಮ್ಮ ಅಭಿಮಾನವನ್ನು ಬೆಳಸಿಕೊಂಡರೆ ಅದರ ವಿಸ್ತಾರಕ್ಕೆ ತಕ್ಕಷ್ಟು ನಮಗೆ ಶಕ್ತಿ ಬರುವದು. ಸೂರ್ಯಚಂದ್ರರೇ ತನ್ನ ಕಣ್ಣುಗಳೆಂದೂ ದಿಕ್ಕುಗಳೇ ತನ್ನ ಕಿವಿಗಳೆಂದೂ ಎಲ್ಲೆಲ್ಲಿಯೂ ಬೀಸುವ ವಾಯುವೇ ತನ್ನ ಶ್ವಾಸವೆಂದೂ ಮಹಾಮಹಾನದಿಗಳೇ ತನ್ನ ರಕ್ತನಾಳಗಳೆಂದೂ ಕುಲಪರ್ವತಗಳೇ ತನ್ನ ಮೂಳೆಗಳೆಂದೂ ಸರ್ವರಲ್ಲಿರುವ ಆತ್ಮವೇ ತಾನೆಂದೂ ಭಾವನೆಯನ್ನು ಮೈಗೂಡಿಸಿಕೊಂಡು ಬಿಟ್ಟರೆ ಪ್ರಪಂಚದಲ್ಲಿರುವ ಸರ್ವಶಕ್ತಿಗಳಿಗೂ ಇವನೇ ಕೇಂದ್ರಸ್ಥಾನನಾಗುವನು. ಯಾವ ಕಾರ್ಯವೂ ಇವನಿಗೆ ಅಸಾಧ್ಯವಾಗುವದಿಲ್ಲ. ಮಾರುತಿಯು ಅಂಥ ಸಾಮರ್ಥ್ಯವನ್ನು ಪಡೆದಿದ್ದವನು. ಅವನು ಮಹಾ ಭಗವದ್ಭಕ್ತನಾಗಿದ್ದದ್ದರಿಂದ ಹಗುರವಾಗುವದು, ಭಾರವಾಗುವದು—ಮೊದಲಾದ ಅಷ್ಟಸಿದ್ಧಿಗಳೂ ಅವನಲ್ಲಿ ಇದ್ದವು. ಇದರ ಬಲದಿಂದ ಅವನು ಬೆಟ್ಟವನ್ನು ಹೊತ್ತದ್ದೂ ಆಕಾಶದಲ್ಲಿ ಹಾರಿದ್ದೂ ಅಸಂಭವವಲ್ಲ. ಇಷ್ಟೇ ಅಲ್ಲ, ಇದು ಮಾರುತಿಯನ್ನು ಒಬ್ಬ ವಾನರನೆಂದು ಇಟ್ಟುಕೊಂಡು ಹೇಳಿದ ಮಾತು. ಮಾರುತಿಯು ಸಾಮಾನ್ಯ ವಾನರನಲ್ಲವೆಂದೂ ರಾವಣನು ತನಗೆ ಯಾರಿಂದಲೂ ಯಾವ ಘಾಸಿಯೂ ಆಗಬಾರದೆಂದು ವರವನ್ನು ಕೇಳುವಾಗ ಪ್ರತಿಯೊಂದು ಪ್ರಾಣಿವರ್ಗದ ಹೆಸರನ್ನು ಹೇಳಿ ವಾನರ ಜಾತಿಯನ್ನು ಕೈಬಿಟ್ಟದ್ದರಿಂದ ಅವನ ನಿಗ್ರಹಕ್ಕೆ ಸಾರ್ಥಕವಾಗಿ ಮಾರುತಿಯು ದೇವಾಂಶದಿಂದ ಹುಟ್ಟಿದವನೆಂದೂ ಪುರಾಣೋಕ್ತಿ ಇರುವದು.

## ರಾಮನು ಹಿಂದಿರುಗಿ ಬಂದದ್ದು

ಶ್ರೀರಾಮನು ಅಯೋಧ್ಯೆಯನ್ನು ಬಿಟ್ಟದ್ದು ಮೊದಲುಗೊಂಡು
ಹದಿನಾಲ್ಕು ವರುಷಗಳು ಮುಗಿಯುವದಕ್ಕೆ ಇನ್ನೊಂದೇ ಒಂದು
ದಿನ ಉಳಿದಿದೆ. "ರಾಮನಿನ್ನೂ ಬರಲಿಲ್ಲವಲ್ಲ" ಎಂದು ಎಲ್ಲರೂ ಪ್ರತಿ
ಕ್ಷಣದಲ್ಲಿಯೂ ಅವನನ್ನೇ ಎದುರು ನೋಡುತ್ತಿದ್ದಾರೆ. ಇನ್ನೂ
ರಾಮನ ಸುದ್ದಿಯೇ ಬರದೆ ಹೋದ್ದರಿಂದ ಎಲ್ಲರಿಗೂ ನಿರಾಶೆಯ
ಗಾಳಿ ಬೀಸಿದಂತಾಗಿ ಎಲ್ಲರೂ ಮನೋರೋಗವನ್ನು ಹಚ್ಚಿಕೊಂಡು
ಬಡವಾಗಿ ನೆಲವನ್ನು ಹಿಡಿಯುವಂತಾಗಿದ್ದಾರೆ. ಹೀಗಿರುವಾಗ ಅದೇನು
ಮಹಿಮೆಯೋ, ಎಲ್ಲರ ಮನಸ್ಸಿಗೂ ಒಮ್ಮೆಗೇ ಆನಂದವಾಯಿತು.
ಅಯೋಧ್ಯೆಯ ನಾಲ್ಕು ದಿಕ್ಕುಗಳೂ ಪ್ರಸನ್ನವಾಗಿ ಕಾಣಿಸಿದವು.
ಹೀಗಾಗುವದು ಅಸಂಭವವಲ್ಲ. ಮಹಾನದಿಯ ಪ್ರವಾಹವು ತುಂಬಿ
ಹರಿಯುತ್ತ ಊರಬಾಗಿಲವರಿಗೂ ಬಂದಾಗ ಊರಿನವರಿಗೆಲ್ಲಾ ತಣ್ಪು
ದೋರುವದಿಲ್ಲವೆ? ಈಗ ರಾಮನು ಅಯೋಧ್ಯೆಯ ಪ್ರಾಂತದ ಹತ್ತಿ
ರಕ್ಕೆ ಬಂದಿರಬಹುದಾದ್ದರಿಂದ ಜನರಿಗೆಲ್ಲಾ ಹೀಗಾಗಿರುವದರಲ್ಲ ಸಂ
ಶಯವಿಲ್ಲ. ಒಂದುಪಕ್ಷ ರಾಮನ ಆಗಮನದಿಂದ ರಾಜಪರಿವಾರ
ದವರಿಗೆ ಆನಂದವಾಗಬೇಕೇ ಹೊರತು ಪ್ರಜಾಸಾಮಾನ್ಯವಾಗಿ ಎಲ್ಲ
ರಿಗೂ ಆಗುವದೊಪ್ಪಲಾರದೆಂಬ ಸಂಶಯವೂ ನಿಲ್ಲುವದಿಲ್ಲ. ಏಕೆಂದರೆ
ಆ ಸಮಯದಲ್ಲಿ ಬಹುಕಾಲದಿಂದ ಅಗಲಿರುವ ತನ್ನ ಪ್ರಜೆಗಳನ್ನು
ನೋಡುವ ಕಾಲವು ಸನ್ನಿಹಿತವಾಯಿತೆಂಬ ಆನಂದವು ರಾಮನ ಮನ
ಸ್ಸಿನಲ್ಲಿ ಉಂಟಾಗಿರಬೇಕು. ಅದರ ಪ್ರಭಾವವೇ ಅವನ ಮೇಲೆ
ಪ್ರೇಮವುಳ್ಳ ಪ್ರಜೆಗಳ ಮನಸ್ಸಿನಲ್ಲೆಲ್ಲಾ ಆವಿರ್ಭವಿಸಿರಬೇಕು.
ಒಂದು ಕೋಣೆಯಲ್ಲಿ ಸ್ವಲ್ಪ ದೂರದೂರದಲ್ಲ ಇದಿರುಬದಿರಾಗಿ ಎರಡು
ತಂಬೂರಿಗಳನ್ನಿಟ್ಟು ಅವುಗಳಲ್ಲಿ ಒಂದನ್ನು ಮಿಾಟಿದರೆ ಸ್ವಲ್ಪ ಹೊತ್ತಿ
ನಲ್ಲಿ ಇನ್ನೊಂದರಿಂದಲೂ ತಾನಾಗಿಯೇ ನಾದವು ಹುಟ್ಟುವದನ್ನು
ಎಲ್ಲರೂ ಪರೀಕ್ಷಿಸಿ ನೋಡಬಹುದು. ಅದರಂತೆ ಎಲ್ಲರ ಮನಸ್ಸೆಂ
ಬುದು ಬೇರೆಬೇರೆ ತಂಬೂರಿಗಳ ಹಾಗೆ. ಒಬ್ಬನ ಮನಸ್ಸಿನ
ನೋಂಕು ಇನ್ನೊಬ್ಬನಿಗೆ ಬಹುಬೇಗ ತಗಲುವದು. ಆಳುವವರನ್ನು

ನೋಡಿದ ಕೂಡಲೇ ಅಳುವಹಾಗಾಗುವದಕ್ಕೂ ನಗುವವರನ್ನು ನೋಡಿದ ಕೂಡಲೆ ನಗುವಹಾಗಾಗುವದಕ್ಕೂ ಇದೇ ಕಾರಣ. ಎಲ್ಲರ ಮನಸ್ಸುಗಳೂ ಒಂದೇ ಎಂಬುದಿಷ್ಟೇ ಏಕೆ? ಕಣ್ಣಿಗೆ ಕಟ್ಟಿದ ಹಾಗೆ ಬೇರೆಬೇರೆಯಾಗಿ ಕಾಣುವ ಎಲ್ಲರ ದೇಹಗಳೂ ಕೂಡ ಒಂದೇ ಎಂದು ಮನಗಾಣಿಸಬಹುದು. ಇನ್ನು ಎಲ್ಲರ ಆತ್ಮವೂ ಒಂದೇ ಎಂಬುದನ್ನು ಹೇಳಬೇಕಾದ್ದೇನು? ಸೀತಾರಾಮಲಕ್ಷ್ಮಣರು ಮನೆಯ ಬಾಗಿಲಿಗೆ ಬಂದಂತಾಗಿ ಆ ತಾಯಿಯರಿಗುಂಟಾದ ಉಲ್ಲಾಸವನ್ನಂತು ಹೇಳತೀರದು.

ಭರತನಿಗೆ ಬಲಗಣ್ಣೂ ಬಲಭುಜವೂ ಹಾರುವದಕ್ಕೆ ಮೊದಲಾದವು. ಈ ಶುಭಶಕುನದಿಂದ ಅವನ ಮನಸ್ಸಿಗೊಂದು ಅಪೂರ್ವವಾದ ಆನಂದವುಂಟಾಯಿತು. ಹದಿನಾಲ್ಕು ವರುಷದ ಅವಧಿ ಮುಗಿಯುತ್ತ ಬಂದದ್ದನ್ನು ನೆನಸಿಕೊಂಡ ಕೂಡಲೆ ಅವನ ಮನಸ್ಸಿಗೆ ದಿಗಿಲಾಯಿತು. ಆದರೆ ಶಕುನಗಳು ಶ್ರೀರಾಮಾಗಮನವನ್ನೇ ಸೂಚಿಸುತ್ತಿರಬಹುದೆಂದು ತೋರಿದ್ದರಿಂದ ಅವನು ತನ್ನನ್ನು ತಾನೇ ಸಮಾಧಾನ ಮಾಡಿಕೊಂಡು ತದೇಕಮನಸ್ಕನಾಗಿದ್ದನು. ಹೀಗಿರುವಾಗ ಮಾರುತಿರಾಯನ ಸ್ವಾರಿಯು ದೂರದಲ್ಲಿ ಬರುತ್ತಿರುವದು ಕಂಡು ಬಂತು. ಅವನನ್ನು ಕಾಣುತ್ತಲೇ ಭರತನು ತನ್ನ ಪುಣ್ಯಕ್ಕೆ ಎಣೆಯೇ ಇಲ್ಲವೆಂದು ಶರೀರದ ಮೇಲೆಲ್ಲಾ ರೋಮಾಂಚವನ್ನು ಪಡೆದು ಆನಂದಾಶ್ರುವನ್ನು ಸುರಿಸಿದನು. ಜಟಾಮುಕುಟಧಾರಿಯಾಗಿ ಕೃಶಾಂಗನಾಗಿ ದೀನವದನನಾಗಿ ದೀನವಾಣಿಯಿಂದ ರಾಮ, ರಾಮ, ಎಂದು ಅಖಂಡಸ್ಮರಣೆಯನ್ನು ಮಾಡುತ್ತಿರುವ ಭರತನನ್ನು ನೋಡಿ ಮಾರುತಿಯು "ಕ್ಷೇಮ; ಶ್ರೀರಾಮಚಂದ್ರನು ಹಿಂದಿರುಗಿ ಬರುತ್ತಿರುವನು; ಸೀತಾಲಕ್ಷ್ಮಣರೊಡನೆ ರಾಮನು ನಗರದ ಸಮೀಪಕ್ಕೆ ಬಂದಿರುವನು" ಎಂದು ಉದ್ಘೋಷಿಸಿದನು. ಪ್ರಾಣೋತ್ಕ್ರಮಣ ಕಾಲದಲ್ಲಿ ಸಂಜೀವನವನ್ನೆರೆದಂತಾಗಿ ಭರತನಿಗೆ ಜೀವ ಬರುವಷ್ಟರಲ್ಲಿ ಮಾರುತಿಯು ಅಲ್ಲಿಗೆ ಪ್ರವೇಶಮಾಡಿ ಶ್ರೀರಾಮ ವೃತ್ತಾಂತವನ್ನೆಲ್ಲಾ ವಿಸ್ತಾರವಾಗಿ ತಿಳಿಸಿದನು. ಮಾರುತಿಯನ್ನು ನೋಡಿ ಭರತನು

ಸಾಕ್ಷಾದ್ರಾಮನನ್ನೇ ಕಂಡಂತೆ ಆನಂದಸಾಗರದಲ್ಲಿ ಮಗ್ನನಾದನು. ಅತ್ತ ಮಾರುತಿಯು ಮತ್ತೆ ಶ್ರೀರಾಮನ ಬಳಿಗೆ ಹಾರಿ ಹೋಗಿ ಭರತನ ಸ್ಥಿತಿಯನ್ನು ತಿಳಿಸಿದನು.

ಇತ್ತ ಭರತನು ಅತ್ಯುತ್ಸಾಹದಿಂದ ಊರೊಳಕ್ಕೆ ಬಂದು ಮೊದಲು ಸರ್ವವೃತ್ತಾಂತವನ್ನೂ ವಸಿಷ್ಠರಿಗೆ ವಿಜ್ಞಾಪನೆಮಾಡಿದನು. ಆಮೇಲೆ ಆ ಸುದ್ದಿ ತಾಯಿಯರಿಗೆಲ್ಲಾ ತಿಳಿಯಿತು. ಅವರೆಲ್ಲರೂ ತತ್ಕ್ಷಣದಲ್ಲಿ ಯೇ ಎದ್ದು ಹರ್ಷಸಂರಂಭದಿಂದ ಭರತನ ಕಡೆಗೆ ಬಂದು ಎಲ್ಲಾ ಸಂಗತಿಯನ್ನೂ ತಿಳಿದುಕೊಂಡರು. ಇದರಂತೆ ನಗರವಾಸಿಗಳೆಲ್ಲರೂ ಬಂದು ವಿಚಾರಿಸಿಕೊಂಡು ಹೋದರು. ಇನ್ನು ಶ್ರೀರಾಮಚಂದ್ರನನ್ನು ಇದಿರುಗೊಳ್ಳುವದಕ್ಕೆ ಹೊರಡುವ ಸನ್ನಾಹವು ನಡೆಯಿತು. ಮೊಸರು, ದೂರ್ವೆ, ಗೋರೋಜನ, ಹಣ್ಣು, ಹೂ, ನೂತನವಾದ ತುಲಸೀದಳ—ಮೊದಲಾದ ಮಂಗಲದ್ರವ್ಯಗಳನ್ನು ಸುವರ್ಣಪಾತ್ರೆಯಲ್ಲಿಟ್ಟುಕೊಂಡು ಮುತ್ತೈದೆಯರು ಮುಂದಾದರು. ನಗರವಾಸಿಗಳು ಎಲ್ಲೆಲ್ಲಿ ಹೇಗೆ ಹೇಗೆ ಇದ್ದವರು ಹಾಗೆ ಹಾಗೆಯೇ ಅವರ ಹಿಂದೆ ಹೊರಟರು. ಎಲ್ಲರೂ ನಾನು ಮುಂದು ತಾನು ಮುಂದೆಂದು ದೊಡ್ಡ ಹೆಜ್ಜೆ ಇಡು ತ್ತ ಹೋದ್ದರಿಂದ ಆ ಸಮಯದಲ್ಲಿ ಮುದುಕರನ್ನೂ ಹುಡುಗರನ್ನೂ ಕೇಳುವವರೇ ದಿಕ್ಕಿಲ್ಲದಂತಾಯಿತು. ಗುರುಗಳನ್ನೂ ಪರಿಜನರನ್ನೂ ಶತ್ರುಘ್ನನನ್ನೂ ಸಂಗಡ ಕರೆದುಕೊಂಡು ಭರತನು ಹೊರಟನು. ದೂರದಲ್ಲಿ ವಿಮಾನವು ಕಾಣಬರುತ್ತಲೇ ಎಲ್ಲರೂ ಮಂಗಳಸ್ವರದಿಂದ ಗಾನಮಾಡುವದಕ್ಕಾರಂಭಿಸಿದರು. ಶ್ರೀರಾಮಚಂದ್ರನೆಂಬ ಪೂರ್ಣ ಚಂದ್ರನ ಆಗಮನದಿಂದ ಅಯೋಧ್ಯೆಯೆಂಬ ಸಾಗರವು ಉಕ್ಕಿ ಹರಿ ಯಿತು. ಪ್ರಸಿದ್ಧರಾದ ವಾನರರಿಗೆಲ್ಲಾ ಅಯೋಧ್ಯಾಪ್ರಾಂತದ ಪರಿ ಚಯವನ್ನು ಮಾಡಿಕೊಡುತ್ತ ಶ್ರೀರಾಮನು ಪುರಜನರ ಸಂದಣಿ ಇರುವ ಕಡೆ ತನ್ನ ವಿಮಾನವನ್ನು ಕೆಳಕ್ಕೆ ಇಳಿಸಿದನು. ವಸಿಷ್ಠ ರನ್ನು ಕಾಣುತ್ತಲೇ ಶ್ರೀರಾಮನು ಧನುರ್ಬಾಣಗಳನ್ನು ಕೆಳಗಿಟ್ಟು ಮುಂದೆ ಬಂದು ಅವರ ಪಾದದಮೇಲೆ ತಲೆಯನ್ನಿಟ್ಟನು. ಅಷ್ಟರಲ್ಲಿ ಭರತನು ಬಂದು ಕಣ್ಣುಗಳಲ್ಲಿ ಆನಂದಬಾಷ್ಪವನ್ನು ಸುರಿಸುತ್ತ

ರಾಮನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ರಾಮನು ಅವನನ್ನು ಬಾಚಿ ತಬ್ಬಿಕೊಂಡು ಸಂತಯಿಸಿದನು. ಶ್ರೀರಾಮನು ಎಲ್ಲರ ಯೋಗಕ್ಷೇಮವನ್ನೂ ಯಥಾಯೋಗ್ಯವಾಗಿ ವಿಚಾರಿಸಿದನು. ಸಮಸ್ತರೂ ತಮಗೆ ಹೊಸದಾಗಿ ಜೀವಬಂತೆಂದು ತಿಳಿದವರಾಗಿ ಆನಂದಭರಿತರಾದರು. ಈ ಸಂದಣಿಯಲ್ಲಿ ರಾಮಚಂದ್ರನು ಸರ್ವಾಲಂಕಾರಸಂಪೂರ್ಣವಾಗಿದ್ದ ಆ ನಗರದ ಕಡೆಗೆ ತೆರಳುತ್ತಿರಲು ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು. ಪುರಪ್ರವೇಶವಾದೊಡನೆಯೇ ಭರತನು ವಸಿಷ್ಠರೊಡನೆ ಆಲೋಚನೆಯನ್ನು ನಡೆಸಿ ಆದಿನವೇ ಪಟ್ಟಾಭಿಷೇಕ ಮುಹೂರ್ತವನ್ನು ನಿಶ್ಚಯಿಸಿದನು. ಭರತನ ಅಪ್ಪಣೆಯ ಪ್ರಕಾರ ಊರಲ್ಲೆಲ್ಲಾ ಕ್ಷಣಮಾತ್ರದಲ್ಲಿ ಪತಾಕೆಗಳೂ ಮಕರತೋರಣಗಳೂ ಚಿತ್ರಚಿತ್ರವಾದ ಮಂಟಪಗಳೂ ಎದ್ದುಕೊಂಡವು. ಪರಮಾತ್ಮನು ಸಂಕಲ್ಪಮಾತ್ರದಿಂದ ವಿವಿಧ ಪ್ರಪಂಚವನ್ನು ಸೃಷ್ಟಿ ಮಾಡಿದನೆಂಬ ಮಾತನ್ನು ಭರತನು ಕೃತಿಯಲ್ಲಿ ತೋರಿಸಿದನು. ಆ ಪಟ್ಟಾಭಿಷೇಕ ಸಮಾರಂಭವನ್ನು ಸಜ್ಜುಗೊಳಿಸುವ ಸಡಗರದಲ್ಲಿ ಪರಮಾತ್ಮನ ಸರ್ವವ್ಯಾಪಿತ್ವವನ್ನು ಕೂಡ ಭರತನು ಉದಾಹರಣೆಯಾಗಿ ತೋರಿಸಿದನು. ಆ ದಿವಸ ಭರತನು ಕೈಹಾಕದ ಕೆಲಸವಿಲ್ಲ. ಇಷ್ಟು ದಿವಸ ತನ್ನ ಮೇಲೆ ಇದ್ದ ಭಾರವನ್ನು ಈ ದಿವಸ ಶ್ರೀರಾಮಚಂದ್ರನಿಗೆ ಒಪ್ಪಿಸಿ ಹಾಯಾಗಿರುವೆನೆಂಬ ಆನಂದದ ಆವೇಶದಲ್ಲಿ ಅವನಿಗೆ ಎಷ್ಟು ಓಡಾಡಿದರೂ ತೀರದು; ಎಷ್ಟು ಕೆಲಸಮಾಡಿದರೂ ತೀರದು. ವಿಲಕ್ಷಣವಾದ ಒಂದು ಶಕ್ತಿವಿಶೇಷವು ಅವನೊಳಗೆ ಪ್ರವೇಶಮಾಡಿದಂತಾಗಿ ನಿಂತಕಡೆ ನಿಲ್ಲದೆ ಎಲ್ಲೆಲ್ಲಿ ಎಷ್ಟೆಷ್ಟು ಅಲಂಕಾರ ವಿಶೇಷಗಳನ್ನು ಮಾಡಿಸಿದರೂ ಸಾಕೆನಿಸದೆ ಭರತನು ಆದಿವಸ ಪೃಥ್ವಿಯ ಕುಶಲವಿದ್ಯಾಪ್ರವೀಣರ ಪ್ರಾವೀಣ್ಯವನ್ನೆಲ್ಲಾ ಒಂದು ಕಡೆ ಸಂಗ್ರಹಿಸಿದ್ದದ್ದರಿಂದ ಆ ಅಯೋಧ್ಯೆಯ ನೋಟಕರಿಗೆ ದೇವೇಂದ್ರನ ಅಮರಾವತಿಯೇ ಶ್ರೀರಾಮನ ಶುಭಾಗಮನವನ್ನು ಬಯಸುವದಕ್ಕಾಗಿ ಇಳಿದು ಬಂದಿರುವದೆಂಬಂತೆ ಶೋಭಿಸುತ್ತಿತ್ತು. ಭರತನಿಂದ ಅಲಂಕೃತವಾದ ಆ ನಗರವನ್ನು ತನ್ನ ಜನ್ಮಭೂಮಿಯೆಂದು ಗುರ್ತಿಸುವದಕ್ಕೆ

ಶ್ರೀರಾಮನು ಕೂಡ ಅತ್ತಿತ್ತ ನೋಡಬೇಕಾಗುತ್ತಿತ್ತು. ಶ್ರೀರಾಮನು ರಥಾರೂಢನಾಗಿ ರಾಜವೀಧಿಯಲ್ಲಿ ಬರುತ್ತಿರುವಾಗ ಆ ಆನಂದದ ಆವೇಶದಲ್ಲಿ ಏನು ಮಾಡಬೇಕೆಂದು ತೋಚದ ಭರತನು ರಾಮನಿಗೆ ಯಾವ ಯಾವ ಬಗೆಯ ಸೇವೆಯನ್ನು ಮಾಡಿದರೂ ಸಾಲದು. ಅವನು ಒಮ್ಮೆ ಛತ್ರಿಯನ್ನು ಹಿಡಿಯುವನು; ಒಮ್ಮೆ ಚಾಮರವನ್ನು ಹಾಕುವನು; ಒಮ್ಮೆ ಚಿನ್ನದ ದೀವಟಿಗೆಯನ್ನು ಹಿಡಿಯುವನು; ಒಮ್ಮೆ ಭಜನೆಯ ಕೂಟದಲ್ಲಿ ಸೇರಿ ಮೈಮರೆತು ಕರತಾಲಪೂರ್ವಕವಾಗಿ ರಾಮನಾಮವನ್ನು ಗಾನಮಾಡುವನು. ಈ ರೀತಿಯಲ್ಲಿ ಉತ್ಸವವು ಅರಮನೆಗೆ ಬಂದದ್ದಾಯಿತು.

ಶ್ರೀರಾಮನು ಗೃಹಪ್ರವೇಶ ಮಾಡುತ್ತಲೇ ತಾಯಿಯರೆಲ್ಲರೂ ಬಂದು ಆಲಿಂಗನೆ ಮಾಡಿ ಮೈಮರೆತರು. ಮಗನ ಹಿತವನ್ನೇ ತನ್ನ ಹಿತವೆಂದು ಭಾವಿಸುವಷ್ಟು ಬಲವತ್ತರವಾದ ಪ್ರೇಮಾವೇಶವುಳ್ಳ ಕೈಕಯಿಯ ಆನಂದವನ್ನಂತು ಹೇಳತೀರದು. ಅಷ್ಟರಲ್ಲಿಯೇ ಭರತನು ಶ್ರೀರಾಮನ ಬಳಿಗೆ ಬಂದು ಮೊದಲು ಜಟಾವಿಸರ್ಜನೆಯಾಗಬೇಕೆಂದು ಸೂಚಿಸಿ ಅದಕ್ಕೆ ತಕ್ಕ ಸನ್ನಾಹವನ್ನು ಮಾಡಿದನು. ಭರತನು ರಾಮನ ತಮ್ಮ. ರಾಮನು ಭರತನ ಅಣ್ಣ. ಯಾರ ಪ್ರೇಮವನ್ನೆಷ್ಟೆಂದು ಹೇಳಬೇಕು! ಭರತನ ಜಟಾವಿಸರ್ಜನೆಯಾಗುವದು ಮೊದಲನೇ ಕೆಲಸವೆಂದು ಹೇಳಿ ರಾಮನು ಆ ಕೆಲಸವನ್ನು ಇತರರ ಕೈಗೆ ಬಿಡದೆ ತಾನೇ ಸಾಕ್ಷಾತ್ತಾಗಿ ಅದಕ್ಕೆ ಕೈ ಹಾಕಿ ಜಟೆಯನ್ನೆಲ್ಲಾ ಬಿಡಿಸಿ ಆಮೇಲೆ ತಾನೇ ತನ್ನ ಜಟೆಯನ್ನು ಬಿಡಿಸಿಕೊಂಡನು. ಮಂಗಲಸ್ನಾನಕ್ಕೆ ಎಲ್ಲವೂ ಸಿದ್ಧವಾಗಿತ್ತು. ಭರತನ ಮಂಗಲಸ್ನಾನವು ಮೊದಲಾಗತಕ್ಕದ್ದೆಂದು ರಾಮನು ತಾನೇ ಸಾಕ್ಷಾತ್ತಾಗಿ ಅವನಿಗೆ ಸ್ನಾನವನ್ನು ಮಾಡಿಸಿ ಆಮೇಲೆ ತಾನು ಸ್ನಾನವನ್ನು ಮಾಡಿದನು. ಅಷ್ಟು ಹೊತ್ತಿಗೆ ವಸಿಷ್ಠರು ಮಹಾಮಹಾ ಪೂಜ್ಯರಾದ ಬ್ರಾಹ್ಮಣರನ್ನೂ ಮಂಗಲದ್ರವ್ಯಗಳನ್ನೂ ಸಿದ್ಧಗೊಳಿಸಿದರು. ಸಮಸ್ತ ರಾಜಾಧಿರಾಜರೂ ಕಪ್ಪಕಾಣಿಕೆಗಳನ್ನು ಸಿದ್ಧಮಾಡಿಕೊಂಡು ಸಮಯವನ್ನು ಕಾದಿರಲು ಪರಮಮಂಗಲಮುಹೂರ್ತದಲ್ಲಿ ಸರ್ವರ ಜಯ

ಘೋಷದೊಡನೆ ಸೀತಾರಾಮರು ಸರ್ವಾಲಂಕಾರಭೂಷಿತರಾಗಿ ಸಿಂಹಾಸನಾರೂಢರಾದರು. ಈಗ ಅಯೋಧ್ಯಾಪಟ್ಟಣವು ನಿಜವಾಗಿ ಅಯೋಧ್ಯಾಪಟ್ಟಣವಾಯಿತು. ಮಗನ ಉತ್ಸಾಹಾತಿಶಯವನ್ನು ನೋಡಿದಾಗ ಅದು ಕೈಕಯಿಗೆ ರಾಮಪಟ್ಟಾಭಿಷೇಕಕ್ಕಿಂತ ಸಹಸ್ರ ಪಾಲು ಆನಂದವನ್ನುಂಟುಮಾಡಿತು. ಈಗ ಮಂಥರೆಯ ದುಷ್ಪ್ರಾಣವೂ ಮಾಯವಾಯಿತು. ಭರತನು ತಾನು ಕೂಡಿಟ್ಟಿದ್ದ ಅನರ್ಘ್ಯವಾದ ರತ್ನಾಭರಣಗಳನ್ನು ಆ ಆನಂದಸಮಯದಲ್ಲಿ ಎಲ್ಲರಿಗೂ ಸೂರೆಮಾಡಿ ಬಿಟ್ಟನು. ಪರಮಾತ್ಮನ ದರ್ಶನಮಾತ್ರದಿಂದಲೇ ಸರ್ವದಾರಿದ್ರ್ಯ ದುಃಖಗಳೂ ದಿಕ್ಕುಗೆಟ್ಟು ಹೋಗುವವೆಂಬ ಮಾತನ್ನು ಅಲ್ಲಿ ನೆರೆದಿದ್ದ ಸರ್ವರೂ ಇದರಿಂದ ಮನಗಂಡರು. ಪರಮಾತ್ಮಪ್ರಾಪ್ತಿಯಾಗು ವದಕ್ಕೆ ಮುಂಚೆ ಮುಮುಕ್ಷುಗಳು ಪ್ರಯತ್ನಪೂರ್ವಕವಾಗಿ ವೈರಾಗ್ಯವನ್ನು ಮೈಮೇಲೆ ಹಾಕಿಕೊಳ್ಳುವರು. ಪರಮಾತ್ಮಪ್ರಾಪ್ತಿ ಯಾದ ಮೇಲಂತು ಅವರಿಗೆ ನವನಿಧಿಗಳು ಕೂಡ ಕಾಲಿನ ಕಸಕ್ಕಿಂತ ಕಡೆ. ಅದರಂತೆ ಭರತನು ತನ್ನ ಪರಮಪ್ರೇಮಮೂರ್ತಿಯಾದ ರಾಮಚಂದ್ರನು ತನ್ನ ಸ್ವಾಮಿಯಾಗಿ ತನ್ನ ಬಳಿಯಲ್ಲಿ ನಿಂತ ಆನಂದದ ಸಡಗರದಲ್ಲಿ ಅವನಿಗೆ ಯಾವ ಐಶ್ವರ್ಯದ್ದೇನು ಬೆಲೆ? ಅವನ ದಾನ ಧರ್ಮವನ್ನು ಒಂದೇ ಮಾತಿನಲ್ಲಿ ಹೇಳಬೇಕೆಂದರೆ ತೆಗೆದುಕೊಂಡವ ರಿಗೆ ಸಾಕುಸಾಕೆನಿಸಿತು; ಕೊಡುವವನಿಗೆ ಇನ್ನೂ ಸಾಕೆನಿಸಲಿಲ್ಲ. ಈ ರೀತಿಯಲ್ಲಿ ಲೋಕೋತ್ತರವಾದ ವೈಭವದಿಂದ ಶ್ರೀರಾಮಚಂದ್ರ ನಿಗೆ ಮಹಾಸಾಮ್ರಾಜ್ಯಪಟ್ಟಾಭಿಷೇಕವನ್ನು ಮಾಡಿ ಭರತನು ರಾಮ ಸೇವಾತತ್ಪರನಾಗಿ ತನ್ನ ಕೀರ್ತಿಚಂದ್ರಿಕೆಯಿಂದ ಹತ್ತು ದಿಕ್ಕುಗಳಿಗೂ ಆನಂದವನ್ನು ಹರಡಿ ತನ್ನ ಜನ್ಮವನ್ನು ಸಾರ್ಥಕಮಾಡಿಕೊಂಡನು.

## ಸಾರಾಂಶ

ಭರತನ ಬಂಧುಪ್ರೇಮವು ಮೂರುಲೋಕಗಳಿಗೂ ಮೇಲು ಪಂಕ್ತಿಯಾಗಿರುವದು. ಭರತನಂಥ ಮಹನೀಯರು ಹುಟ್ಟಿದ್ದರಿಂ ದಲೇ ನಮ್ಮ ದೇಶದ ಧರ್ಮಪ್ರಭಾವವು ಚತುರ್ದಶಲೋಕಗಳನ್ನೂ

ಬೆಳಗುತ್ತಿರುವದು. ಅದು ತ್ರೇತಾಯುಗದ ಮಾತೆಂದು ಅದರ ವಿಷಯದಲ್ಲಿ ಬರೀ ಪೂಜ್ಯಬುದ್ಧಿಯನ್ನು ತೋರಿಸಿ ಯಾರೂ ಸುಮ್ಮನಾಗಬಾರದು. ನಾವು ಕಾಲದ ಬಾಲವನ್ನು ಹಿಡಿದು ಹೋಗುವವರಾಗಬಾರದು. ನಮ್ಮಧಿಕಾರದಿಂದ ಕಾಲವನ್ನು ನಿಯಮನ ಮಾಡುವಂಥವರಾಗಬೇಕು. ಜನರೆಲ್ಲರೂ ಪ್ರಯತ್ನಮಾಡಿ ಭರತನ ಅಂಶವನ್ನು ತಮ್ಮ ಅಂಗಗಳಲ್ಲಿ ತಂದುಕೊಂಡರೆ ಇದೇ ತ್ರೇತಾಯುಗವಾಗುವದು; ಈಗಲೇ ಸೀತಾರಾಮಲಕ್ಷ್ಮಣರು ಬಂದು ನಮ್ಮನ್ನು ಆಲಿಂಗಿಸುವರು. ದೊಡ್ಡವರ ಮೇಲೆ ಪೂಜ್ಯಬುದ್ಧಿಯನ್ನು ತೋರಿಸುವದೆಂದರೆ ಬರೀ ಪದ್ಧತಿಗಾಗಿ ಅವರನ್ನು ಹೊಗಳುವದಲ್ಲ; ಅವರ ನಡೆವಳಿಕೆಯನ್ನು ನಾವು ಅನುಸರಿಸುವದು ಮುಖ್ಯ. ಭರತಖಂಡವು ನಿಜವಾಗಿ ಭರತಖಂಡವಾಗಿರಬೇಕಾಗಿದ್ದರೆ ನಾವು ನಿಜವಾಗಿ ನಮ್ಮ ಪೂರ್ವಿಕರ ಮಕ್ಕಳಾಗಿರಬೇಕು. ನಮ್ಮ ಪೂರ್ವಿಕರ ಧರ್ಮಪ್ರೀತಿಯು ಅನ್ಯಾದೃಶವಾಗಿತ್ತು. ಆದ್ದರಿಂದ ನಾವು ನಮ್ಮ ದೃಷ್ಟಿಯನ್ನು ಧರ್ಮದ ಕಡೆಗೆ ಇಟ್ಟು ನಮ್ಮ ಪೂರ್ವಿಕರ ಹೆಸರನ್ನುಳಿಸಬೇಕು. ನಮ್ಮ ಪೂರ್ವಿಕರು ಧರ್ಮಪ್ರಿಯರಾಗಿ ಅಪಾರವಾದ ಕೀರ್ತಿಯನ್ನು ಸಂಪಾದನೆ ಮಾಡಿ ಆ ಅಕ್ಷಯಭಂಡಾರವನ್ನು ನಮಗೊಪ್ಪಿಸಿ ಹೋಗಿರುವರು. ಅದನ್ನು ಕಳೆದುಕೊಂಡು ಕುಲಕ್ಕೆ ಕಂಟಕರಾಗುವದು ಸರಿಯಲ್ಲ. ಪ್ರತಿಯೊಬ್ಬ ಭಾರತೀಯನೂ ಜನ್ಮಮಾತ್ರದಿಂದ ಭಾರತೀಯನೆನಿಸದೆ ಧರ್ಮದಿಂದಲೂ ಭಾರತೀಯನೆನಿಸಿಕೊಳ್ಳುವದಕ್ಕೇ ಸರ್ವಪ್ರಯತ್ನವನ್ನೂ ಮಾಡಬೇಕು.

**ಜಯಜಯ ರಘುವೀರ ಸಮರ್ಥ**



